# GOVERNOR PRESENTS RAJYA PURASKAR AWARDS



*Her Excellency the Governor Smt. V.S. RamaDevi arrives to attend the function by her Right Sri Rameshwar Thakur, President BSG, New Delhi and Left Sri Kondaji B. Shanukhappa, State Chief Commissioner.*



*Her Excellency the Governor Smt. V.S. RamaDevi presenting the Award to a Cub and Bul Bul, Sri K.V. Tagore Commissioner Youth Service and Sports also present.*

Her Excellency the Governor of Karnataka Smt. V.S. RAMADEVI, Presented the Chathurthacharan Award for cubs, Heerak Pankh Award for Bulbuls, Rajya Puraskar Award for Scouts and Guides, Nipun Award for Rovers and Rangers at a State level special function held at the Glass House, Raj Bhavan on 17th March 2001.

Selected Cub, Bulbul, Scout, Guide Rover and Ranger from each District received the Award on behalf of all participants from the District. During this year 369 cubs, 423 Bulbuls, 1264 Scouts, 930 Guides 28 Rovers and 5 Rangers have been qualified and received the Awards. Nearly 600 Awardees attended the colourful function.

The Governor appreciated the service of the Scouts and Guides rendered to the community. She expressed that the Department of Rural Development and



*Her Excellency the Governor Smt. V.S. RamaDevi and Sri Kondaji B. Shanmukhappa and Sri Rameshwar Thakur and others*



*Her Excellency the Governor Smt. V.S. RamaDevi presenting the Award to a Scout and Guide, Sri K.V. Tagore Commissioner Youth Service and Sports also present.*



*Sri Kondajji B. Shanmukhappa State Chief Commissioner discussing with the Governor*



*The Governor Presenting the Nippun award to a Rover*



*Assembly of Bul Buls and Guides during the award function at the Glass House at Raj Bhavan*



*Assembly of Cubs and Scouts during the award function at the Glass House at Raj Bhavan*

Panchayat Raj, Govt. of Karnataka should come forward to assist in all respects for the spread of scouting and guiding in Rural areas to make the boys and girls of today worthy citizens of tomorrow. She had all appreciations for the Bharat Scouts and Guides, Karnataka. She offered a generous donation of Rs. 5000/- for the activities of the Movement.

Sri Rameshwar Thakur, President, The Bharat Scouts and Guides, India and the former union Minister in his address thanked Sri S.M. Krishna, Hon'ble Chief Minister of Karnataka for sanctioning a grant of Rs. 50 lakhs for the infrastructure development of Besant Park, Training Centre.

In his welcome address Sri Kondajji B. Shanmukhappa, State Chief Commissioner requested the Government of Karnataka to extend all support and help to the movement to grow in Karnataka. He narrated the development and the activities of the Movement in Karnataka.

Sri K.V.R. Tagore, commissioner of youth services and sports, Smt. Muniyamma, former Vice-Chancellor Gulbarga university, Sri C.R. Mohamed Zahiruddin State Commissioner (Scouts), Smt M.G. Bhopaiah, State Commission (Guides) were present the occasion.

Sri T.S. Lucas, State Secretary proposed a vote of Thanks.

**THE GROWTH OF CENSUS IN KARNATAKA**

| Year | Scoutwing | Guidewing | Total |
|---|---|---|---|
| 1990-91 | 37083 | 23554 | 60637 |
| 1999-2000 | 159523 | 86366 | 245889 |

# National Level Rovers and Rangers Moot held at KONDAJJI



*Sri G. Mallikarjunappa, M.P., & Sri Jetha Bhai M. Choudhary Vice President BS&G India, at the Samadi of Late Kondajji Basappa*

The National Level Rovers and Rangers Moot was held at Kondajji Basappa Scouts and Guides Training Centre, Kondajji, Davanagere District from 1st to 6th January 2001.

150 Rovers and Rangers attended the Moot drawn from the states of Karnataka, Delhi, Eastern Railway, Orissa, Northern Railway, Rajasthan, Southern Railway, North Eastern Railway, Tamil Nadu, South Eastern Railway, Madhya Pradesh and Jharkhand

Sri D.L. Sharma, Joint Director (S) The Bharat Scouts and Guides, National Head quaters, New Delhi was the Leader.

Sri G. Mallikarjunappa, Member of Parliament (Lok Sabha) Davanagere was the Chief Guest and delivered the Valedictory address. Sri Jetha Bhai M. Choudhary Vice-President, The Bharat Scouts and Guides, India, New Delhi presided over the function. Prof. M. Surya narayanappa, Asst State Commissioner (P&D) addressed the participants.

Sri G. Mallikarjunappa Member of Parliament, visited the camp areas and promised to provide funds for the development of the camp site at Kondajji. The Guests paid tribute to late Kondajji Basappa the architect of the camp.

Sri K. Thimmappa, SOC(S) co-ordinated the programme Smt. Chaya Sri C. Subramanyan assited the event.

## NATIONAL LEVEL WATER REGATTA HELD AT KONDAJJI

The National Level Water Regatta was held at Kondajji Basappa Scouts and Guides Training Centre, Kondajji from 9th to 13th Jan 2001.103 Rovers and Rangers drawn from Karnataka, Kerala, M.P., Gujarat, West Bengal, Rajasthan, Southern Railway, participated in the National event.

Swimming, Rescuing, Naval terms, Boat work were the activities.

The water activities were conducted at Kondajji Lake and the Swimming pool.

## JAMBORETTE POSTPONED

**THE BHARAT SCOUTS & GUIDES, KARNATAKA,**
State Head Quarters, Bangalore - 560 002

24th Jamborette of Karnataka State and to take place from 4.12.2001 to 10.12.2001 at the Air force Training Ground, Chowglewadi, Tilak Wadi, Belgaum 590 006.

State Secretary.


*Rovers on boat at Kondajji Lake*

Sri K.M., Chacko LT(S) Asst State Commissioner (Sea Scouts) Kerala was the leader of the event. Sri K.Thimmappa, State Organising Commissioner (S) co-ordinated the programme. Smt M.G. Bopaiah State Commissioner (G) visited the camps.

## State Level Trekking Camp held at Nisarga Dhama

The State Level Trekking Camp for Rovers and Rangers was held from 18th Jan to 22nd Jan 2001 at Pilikula, Nisargadhama, Mangalore, Dakshina Kannada Dist. under the auspices of the State Headquarters, The Bharat Scouts and Guides, Karnataka.

Trekking was conducted in two routes in the surrounding area covering a distance of 18 kms on 19.1.2001 and 14 kms on 20.1.2001.

Sri Ram Bhatt Deputy conservator of forests spoke and explained about Nisargadhama. The Rovers and Rangers visited the Indo-Norwegian project where they preserved the plant species of the Western Ghats. Prof. Shetty explained about various trees planted in the areas.



*Sri I.A. Kairanna, DC(S) ,*
*Sri B. Vitob S Nagvekar, Sri J.R. Lobo,*
*Commissioner City Corporation and others*

The Rovers and Rangers visited important places in and around Mangalore on Educational tour 91 Rovers 50 Rangers participated in the State Level event.

Sri M.G. Khaje ALT(S) and DOC (S) and Smt. Usha Ramaiah LT(G) were the Leaders for Rover and Ranger Sections respectively.

Sri B. Vitob S. Nagvekar Chairman, Komal's Group inaugurated the camp. Smt. M.G. Bopaiah, State Commissioner (Guides) presided. Sri N.G. Mohan President LA, Mangalore South delivered the valedictory address. Sri J.R. Lobo, commissioner, Mangalore city corporation presided. Sri Ananth G. Pai, Executive Director, Bharath Beedis Ltd., and former President Scout spoke on the occasion.

Sri I.A. Kairanna, Dist, Commissioner (Scouts) made all arrangements for the success of the activity.

Sri K. Thimmappa and Miss P. Saroja, State organising Commissioners Co-ordinated the Trekking Programme.

## UPA-RASHTRAPATI AWARD FOR KARNATAKA ROVER CREWS

**BHAGAT SINGH OPEN ROVER CREW ANEKAL**, Bangalore South District has won the Upa-Rashtrapati Award for community service. The shield and the certificate was presented by Shri Krishna Kanth, His Excellency the vice-president of India at New Delhi during the Rally held from 23rd March to 27th March 2001.

The Rovers of **SIR M. VISWESHVARAIAH OPEN SCOUT GROUP**, Bangalore North District has won the certificate for community service.

# ರಾಜ್ಯ ಮಟ್ಟದ ವಯಸ್ಕ ನಾಯಕರ ತರಬೇತಿ ಶಿಬಿರಗಳು

## ತರಬೇತಿ ತಂಡದ ಸದಸ್ಯರಿಗೆ ಪದಕ ಬೋದಕರು ಮತ್ತು ಪದಕ ಪರೀಕ್ಷಕರ ತರಬೇತಿ ಶಿಬಿರ :

ಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರದಲ್ಲಿ ದಿನಾಂಕ 4.1.2001 ರಿಂದ 8.1.2001 ರವರೆಗೆ ಶ್ರೀ ಟಿ.ಎಸ್. ಲೂಕಾಸ್ ಎಲ್.ಟಿ(ಎಸ್) ಇವರ ನಾಯಕತ್ವದಲ್ಲಿ ತರಬೇತಿ ತಂಡದ ಸದಸ್ಯರಿಗೆ ಪದಕ ಬೋಧಕರು ಮತ್ತು ಪದಕ ಪರೀಕ್ಷಕರ ತರಭೇತಿ ಶಿಬಿರ ಪ್ರಪ್ರಥಮವಾಗಿ ನಡೆಯಿತು. ಈ ಶಿಬಿರದಲ್ಲಿ 21 ಜನ ತರಬೇತುದಾರರು ಭಾಗವಹಿಸಿದ್ದರು.

ಶ್ರೀ ಎಸ್. ಪಾಲ್‌ರಾಜ್ ಎಲ್‌ಟಿ(ಎಸ್)ನಾರಾಯಣ ಶೆಟ್ಟಿ ಎಸ್.ಟಿ.ಸಿ(ಎಸ್) ಜಾನಕಿ ವೇಣುಗೋಪಾಲ್ ಎಸ್.ಟಿ.ಸಿ.(ಜಿ) ಶ್ರೀನಿವಾಸನ್ ಎಲ್.ಟಿ(ಎಸ್) ಹಾಗೂ ಶ್ರೀ ಎಂ.ಎ. ಚೆಲ್ಲಯ್ಯ ಇವರು ಸಹಾಯಕರಾಗಿದ್ದರು.

ದಿನಾಂಕ 7.1.2001 ರಂದು ನಡೆದ ಸಮಾರೋಪ ಸಮಾರಂಭದ ಮುಖ್ಯ ಅಥಿತಿಗಳಾಗಿ ರಾಷ್ಟ್ರೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಜೆತಾಬಾಯಿ ಚೌದರಿ, ಜಂಟಿ ನಿರ್ದೇಶಕರಾದ ಶ್ರೀ ದೇವಿಲಾಲ್ ಶರ್ಮರವರು ಆಗಮಿಸಿ ಶಿಬಿರಾರ್ಥಿಗಳಿಗೆ ಹಿತವಚನ ನೀಡಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ ಷಣ್ಮುಖಪ್ಪ ರವರು ಅಧ್ಯಕ್ಷತೆ ವಹಿಸಿ ರಾಜ್ಯದಲ್ಲಿ ಸ್ಕೌಟ್ ಗೈಡ್ಸ್ ಚಟುವಟಿಕೆಗಳ ಬಗ್ಗೆ ಮಾತನಾಡಿದರು. ಶ್ರೀ ಟಿ.ಎಸ್. ಲೂಕಾಸ್‌ರವರು ಶಿಬಿರದ ವರದಿಯನ್ನು ಮಂಡಿಸಿದರು. ಶ್ರೀ ಪಾಲ್‌ರಾಜ್‌ರವರು ಸ್ವಾಗತಿಸಿ ಶ್ರೀ ಎಂ.ಎ. ಚೆಲ್ಲಯ್ಯನವರು ವಂದಿಸಿದರು.

## ಧಾರವಾಡದಲ್ಲಿ ರಾಜ್ಯ ಮಟ್ಟದ ತರಬೇತಿ ಸಲಹಗಾರರ ತರಬೇತಿ ಶಿಬಿರ

ಧಾರವಾಡ ಸಸ್ಯಚೇತನ ತರಬೇತಿ ಶಿಬಿರದಲ್ಲಿ ದಿನಾಂಕ 15.1 .2001 ರಿಂದ 19.1.2001ರವರೆಗೆ ಶ್ರೀ ಆನಂದ ಅಡಿಗ ಎ.ಎಲ್.ಟಿ.(ಎಸ್) ಇವರ ನಾಯಕತ್ವದಲ್ಲಿ ತರಬೇತಿ ಸಲಹೆಗಾರರ ತರಬೇತಿ ಶಿಬಿರ ನಡೆಯಿತು. 25 ಜನ ಹಿಮಾಲಯ ವುಡ್ ಬ್ಯಾಡ್ಜ್ ಹೋಲ್ಡರ್ಸ್‌ಗಳು ಈ ಶಿಬಿರದಲ್ಲಿ ಬಾಗವಹಿಸಿದ್ದರು ಶ್ರೀ ನಾರಾಯಣ ಶೆಟ್ಟಿ ಎಸ್.ಟಿ.ಸಿ.(ಎಸ್) ಎಲ್ಲರನ್ನು ಸ್ವಾಗತಿಸಿದರು ಶ್ರೀ ಎಂ.ಎಂ. ಲೊಂಡೆಯವರು ಶಿಬಿರದ ಮೇಲ್ವಿಚಾರಕರಾಗಿದ್ದರು ಶ್ರೀ ಮುಹಮದ್ ವಾಸಿಲ್ ಎಲ್.ಟಿ.(ಎಸ್) ಶ್ರೀ ಬಿ.ಕೆ. ಪಾಟೀಲ್ ಎಲ್.ಟಿ.(ಎಸ್) ಶ್ರೀನರಗುಂದ ಎ.ಎಲ್.ಟಿ.(ಎಸ್) ಇವರು ಸಹಾಯಕರಾಗಿದ್ದರು. 18.1.2001 ರಂದು ಶ್ರೀ ದೊಡ್ಡಮನಿ ಇವರ ಅಧ್ಯಕ್ಷತೆಯಲ್ಲಿ ಸಮಾರೋಪ ಸಮಾರಂಭ ಜರುಗಿತು.

## ಹಿಮಾಲಯ ಕಬ್ ವುಡ್ ಬ್ಯಾಡ್ಜ್ ತರಬೇತಿ ಶಿಬಿರ

ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರದಲ್ಲಿ ಹಿಮಾಲಯ ಕಬ್‌ವುಡ್ ಬ್ಯಾಡ್ಜ್ ತರಬೇತಿ ಶಿಬಿರ ಶ್ರೀ ಎನ್.ಎಂ. ಗುರುಸ್ವಾಮಿಯವರ ನಾಯಕತ್ವದಲ್ಲಿ ದಿನಾಂಕ 20.1.2001ರಿಂದ 29.1.2001 ರವರೆಗೆ ನಡೆಯಿತು 26 ಶಿಬಿರಾರ್ಥಿಗಳು ಭಾಗವಹಿಸಿದ್ದರು. ಶ್ರೀ ಎನ್.ಎಂ. ಗುರುಸ್ವಾಮಿಯವರು 26.1.2001 ರಂದು ಹೃದಯಾಘಾತದಿಂದ ನಿಧನರಾದ್ದರಿಂದ ಶ್ರೀ ಆರ್. ವೆಂಕಣ್ಣ ಎಲ್.ಟಿ.(ಸಿ)ಇವರು ನಾಯಕತ್ವವಹಿಸಿ ಶಿಬಿರವನ್ನು ಮುಕ್ತಾಯಗೊಳಿಸಿದರು. ಶ್ರೀಮತಿ ಹೇಮಾ ವಿಜಯಕುಮಾರ್, ಎಲ್.ಟಿ.(ಸಿ) ಶ್ರೀ ಎಸ್.ಎಸ್. ಹುಸೈನಿ ಎ.ಎಲ್.ಟಿ.(ಸಿ) ಇವರುಗಳು ಸಹಾಯಕರಾಗಿದ್ದರು.

ದಿನಾಂಕ 28.1.2001 ರಂದು ಸಂಜೆ 5.00 ಘಂಟೆಗೆ ಶ್ರೀ ಸಿ.ಆರ್. ಮಹಮದ್ ಜಹಿರುದ್ದೀನ್ ರಾಜ್ಯ ಆಯುಕ್ತರು ಸ್ಕೌಟ್ ಇವರ ಅಧ್ಯಕ್ಷತೆಯಲ್ಲಿ ಸಮಾರೋಪ ಸಮಾರಂಭ ನಡೆಯಿತು ಶ್ರೀ ಟಿ.ಎಸ್. ಲೂಕಾಸ್ ರಾಜ್ಯ ಕಾರ್ಯದರ್ಶಿ ಇವರು ಮುಖ್ಯ ಅಥಿತಿಗಳಾಗಿದ್ದರು.

## ಆಯುಕ್ತರ ಮೂಲ ತರಬೇತಿ ಶಿಬಿರ-ಕೊಂಡಜ್ಜಿ

ದಿನಾಂಕ 27.1.2001 ರಿಂದ 31.1.2001 ರವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರದಲ್ಲಿ ಆಯುಕ್ತರ ಮೂಲ ತರಬೇತಿ ಶಿಬಿರ ನಡೆಯಿತು ಶ್ರೀ ಟಿ.ಎಸ್. ಲೂಕಾಸ್ ಎಲ್.ಟಿ.(ಎಸ್) ಇವರು ನಾಯಕರಾಗಿದ್ದರು ಸ್ಕೌಟ್ಸ್ ವಿಭಾಗದಿಂದ ಶ್ರೀ ಕೆ. ತಿಮ್ಮಪ್ಪ. ಎಲ್.ಟಿ.(ಎಸ್) ಶ್ರೀ ನಾರಾಯಣ ಶೆಟ್ಟಿ ಎಲ್.ಟಿ.(ಎಸ್) ಶ್ರೀ ಮಹಮದ್ ವಾಸಿಲ್ ಎಲ್.ಟಿ.(ಎಸ್) ಶ್ರೀ ಎನ್. ಶ್ರೀನಿವಾಸನ್ ಎಲ್.ಟಿ.(ಎಸ್)



*ಬೋಧನಾ ತರಗತಿಯಲ್ಲಿ ಭಾಗವಹಿಸಿರುವ ಆಯುಕ್ತರ ತರಬೇತಿ ಶಿಬಿರದ ಶಿಬಿರಾರ್ಥಿಗಳು.*

ಗೈಡ್ ವಿಭಾಗದಿಂದ ಶ್ರೀಮತಿ ಗೀತಾ ನಟರಾಜ್ ಎ.ಎಲ್.ಟಿ.(ಜಿ) ಶ್ರೀಮತಿ ರವಿ ವೆಸ್ಲಿ ಎಲ್.ಟಿ.(ಜಿ) ಶ್ರೀಮತಿ ಜಾನಕಿ ವೇಣುಗೋಪಾಲ್ ಎಲ್.ಟಿ.(ಜಿ) ಇವರುಗಳು ಸಹಾಯಕರಾಗಿದ್ದರು.

35 ಶಿಬಿರಾರ್ಥಿಗಳು 16 ಜಿಲ್ಲೆಗಳಿಂದ ಭಾಗವಹಿಸಿದ್ದರು ಎಲ್ಲರೂ ಉತ್ಸಾಹಿಗಳಾಗಿದ್ದರು ದೋಣಿ ವಿಹಾರದ ವ್ಯವಸ್ಥೆ ಮಾಡಲಾಗಿತ್ತು ಶ್ರೀ ಎಂ.ಎ. ಚಲ್ಲಯ್ಯನವರು ಶಿಬಿರಾರ್ಥಿಗಳಿಗೆ ಅವಶ್ಯಕವಾದ ಸ್ವ-ಕಲಿಕೆ ಕೇಂದ್ರ ವ್ಯವಸ್ಥೆ ಮಾಡಿದ್ದರು ಸಾರ್ವಜನಿಕ ಸಂಪರ್ಕದ ಬಗ್ಗೆ ಆಯುಕ್ತರುಗಳಿಗೆ ಮಾಹಿತಿ; ನೀಡಿದರು.

ಶ್ರೀಮತಿ ಪುಷ್ಪಾನಾಡಕರ್ಣಿ ಜಂಟಿ ನಿರ್ದೇಶಕರು (ಗೈಡ್ ಕಾರ್ಯಕ್ರಮ) ನವದೆಹಲಿ ಇವರು ಶಿಬಿರಕ್ಕೆ ಬೇಟಿ ನೀಡಿ ಶಿಬಿರಾರ್ಥಿಗಳಿಗೆ ಹಿತವಚನ ನುಡಿದರು. ಶ್ರೀ ಮಹಮದ್ ಜಹಿರುದ್ದೀನ್ ರಾಜ್ಯ ಆಯುಕ್ತರು (ಸ್ಕೌಟ್) ಇವರು ಭೇಟಿ ನೀಡಿ ಶಿಬಿರವನ್ನು ಉದ್ಘಾಟಿಸಿದರು.

## ರಾಷ್ಟ್ರೀಯ ಮರಳುಗಾಡು ಚಾರಣ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಆಯೋಜಿಸಿದ್ದ ರಾಷ್ಟ್ರೀಯ ಚಾರಣ ಶಿಬಿರ ರಾಜಾಸ್ಥಾನದ ಬೀಕಾನೇರ್‌ನಲ್ಲಿ 16.12.200 ರಿಂದ 21.12.200ದವರೆಗೆ ಸಂಘಟಿಸಲ್ಪಟ್ಟಿತ್ತು. ಪ್ರಪ್ರಥಮವಾಗಿ ನಮ್ಮ ಮರಳುಗಾಡು ಚಾರಣ ರಿಡ್‌ಮಲ್‌ಸರ್ ಹಳ್ಳಿಯಲ್ಲಿ ನೆಲೆಗೊಂಡಿರುವ ತರಬೇತಿ ಕೇಂದ್ರದಿಂದ ಶುರುವಾಯಿತು. ಅಲ್ಲಿಂದ 12 ಕಿ.ಮಿ.ಗಳ ನಡಿಗೆಯನಂತರ ಏಷ್ಯಾದಲ್ಲಿಯೇ ಅತ್ಯಂತ ದೊಡ್ಡದಾದ ಒಂಟೆಗಳ ಫಾರ್ಮ್‌ಗೆ ಬಂದು ತಲುಪಿದೆವು. ಅಲ್ಲಿಂದ ಮುಂದೆ ಮರಳುಗಾಡಿನಲ್ಲಿ 13 ಕಿ.ಮಿ. ಕ್ರಮಿಸಿ ಮುಸ್ಸಂಜೆಯ ಹೊತ್ತಿಗೆ 'ದಾದಾಬಾದಿ' ಗ್ರಾಮಕ್ಕೆ ಬಂದೆವು. ರಾತ್ರಿಯ ಶಿಬಿರಾಗ್ನಿಯಲ್ಲಿ ಹಳ್ಳಿಯ ಜನರಿಗಾಗಿ ಸಾಕ್ಷರತೆಯ ಬಗ್ಗೆ ಪ್ರಹಸನ, ಹಾಡು, ನಾಟಕಗಳನ್ನು ನಡೆಸಿ ಅಕ್ಷರತೆಯ ಅರಿವು ಮೂಡಿಸಲು ಪ್ರಯತ್ನಿಸಿದೆವು. ಮರುದಿನ ಅಂಬಾಸರ್ ಹಳ್ಳಿಗೆ 23 ಕಿ.ಮಿ.ಗಳಷ್ಟು ಚಾರಣವನ್ನು ಮರುಭೂಮಿಯಲ್ಲಿ ನಡೆದು ಕ್ರಮಿಸಿದೆವು. ಚಾರಣದ ಸಮಯದಲ್ಲಿ ಅಲ್ಲಿನ ಪ್ರಾಣಿಸಂಕುಲಗಳಲ್ಲಿ ಮುಖ್ಯವಾದ ನೀಲ್‌ಗಾಯ್, ಕೃಷ್ಣ ಮೃಗಗಳ ಹಿಂಡುಗಳನ್ನು ನೋಡುವ ಅವಕಾಶದೊರೆಯಿತು. ಕ್ಯಾಂಪಿನ ಮೂರನೆ ದಿನ 'ದೇಶ್‌ನೋಕ್' ತಾಲ್ಲೂಕಿನೆಡೆಗೆ 25 ಕಿ.ಮಿ.ಗಳ ಚಾರಣ ಮಾಡಿ ಕ್ರಮಿಸಿದೆವು. ದೇಶ್‌ನೋಕ್‌ನಲ್ಲಿರುವ ಅತ್ಯಂತ ವಿಶಿಷ್ಟವಾದ, ಇಲ್ಲಿಗಳನ್ನು ಪೂಜಿಸಲ್ಪಡುವ ಕರಣಿಮಾತಾ ಮಂದಿರವನ್ನು ವೀಕ್ಷಿಸಿದೆವು. ದೇಶ್‌ನೋಕ್‌ನಿಂದ ಚಾರಣವನ್ನು ಮುಂದುವರೆಸಿಕೊಂಡು ಸಂಜೆಯ ಹೊತ್ತಿಗೆ 'ಸೋವಾ' ಗ್ರಾಮಕ್ಕೆ ಬಂದೆವು. ಗ್ರಾಮಸ್ಥರು ಶಿಬಿರಾರ್ಥಿಗಳೆಲ್ಲರಿಗೂ ಅಲ್ಲಿನ ಸಂಪ್ರದಾಯದಂತೆ ತಿಲಕ ವಿಟ್ಟು ಆರತಿ ಮಾಡಿ ಬರಮಾಡಿಕೊಂಡರು. ಗ್ರಾಮಸ್ಥರ ಆತಿಥ್ಯ ಸ್ವೀಕರಿಸಿ 'ಮೋರ್‌ಖಾನ್' ಹಳ್ಳಿಗೆ ರಾತ್ರಿ ಚಾರಣ ಮಾಡುತ್ತಾ ತಲಿಪಿದೆವು. ಈ ಹಳ್ಳಿಯಲ್ಲಿ ಹೇರಳ ಸಂಖ್ಯೆಯಲ್ಲಿ ನವಿಲುಗಳು ನಿರ್ಭಯವಾಗಿ ಗ್ರಾಮಸ್ಥರೊಡನೆ ಬೆರೆತು ಜೀವಿಸುತ್ತಿರುವುದನ್ನು ಕಂಡು ನಮಗೆ ಆಶ್ಚರ್ಯವಾಯಿತು. ಚಾರಣದ ಕೊನೆಯದಿನದಂದು ಶಿಬಿರಾರ್ಥಿಗಳಿಗಾಗಿ ಒಂಟೆ ಸವಾರಿಯನ್ನು ಶಿಬಿರಾಧಿಕಾರಿಗಳು ಯೋಜಿಸಿದ್ದರು. ಕಡೆಯ ದಿನದ ಚಾರಣದ ಹಾದಿಯಲ್ಲಿ, ಎತ್ತರೆತ್ತರ ಮರಳುಗುಡ್ಡಗಳನ್ನು ಹತ್ತಿಳಿಯುತ್ತಾ 'ಮುಕಾಮ್' ಎಂಬ ಪ್ರದೇಶಕ್ಕೆ ಬಂದೆವು. ಇಲ್ಲಿ ಬಿಶನೋಯಿ ಸಮಾಜದ ಆದಿಗುರು ಜಂಬೇಶ್ವರ್ ಗುರುಮಹಾರಾಜ್‌ರವರ ಸಮಾಧಿ ಸ್ಥಳ ಹಾಗೂ ಇಂದಿಗೂ ಜ್ವಲಿಸುತ್ತಿರುವ ಅಖಂಢ ಜ್ಯೋತಿ ಮಂದಿರವನ್ನು ವೀಕ್ಷಿಸಿದೆವು.

ಶಿಬಿರ ಮುಕ್ತಾಯವಾದ ನಂತರ ಎರಡು ದಿನ ರಾಜಸ್ಥಾನದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಕೇಂದ್ರ ಕಛೇರಿಯಲ್ಲಿ ವಾಸ್ತವ್ಯ ಹೂಡಿ ಭಾರತದ ಭವ್ಯ ನಗರಿ ಜೈಪುರವನ್ನು ವೀಕ್ಷಿಸುವ ಸದವಕಾಶ ದೊರೆಯಿತು. ಶಿಬಿರದಲ್ಲಿ ದಿನ ಕಾಲಗಳ ಗಣನೆಯಿಲ್ಲದೆ ರಾಜಸ್ಥಾನದ ಥಾರ್ ಮರುಭೂಮಿಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಸೋದರ ಸೋದರಿಯರೊಂದಿಗೆ ಕಳೆದ ಸಮಯ ಮರೆಯಲಾಗದ ಅದ್ಭುತ ಅನುಭವವಾಗಿದೆ.

ಶ್ರೀ ಪಾದರಾಜ ಜಿ. ಮುದಡಿ
ಆಶ್ಲೆ ಮೆಂಡೊನ್ಸಾ
ಮಂಜುನಾಥ್ ಕೆ. ಹೆಚ್. (ರೋವರ್ಸ್)



ರಾಜಸ್ಥಾನದ ಮರಳು ಗಾಡಿನ ಚಾರಣದಲ್ಲಿ ಬಾಗವಹಿಸಿರುವ ರಾಜ್ಯದ ರೋವರ್ ತಂಡ

"Coming together is a beginning
Keeping together is progress
Working together is success"

"Man is born to work
Not to rest and Rust"

"An atom of practice is better than
a ton of theories"

## ಗಣರಾಜ್ಯೋತ್ಸವ ದಿನಾಚರಣೆ 2001

ಬೆಂಗಳೂರು ಫೀಲ್ಡ್ ಮಾರ್ಷಲ್ ಮಾಣೆಕ್ ಷಾ ಮೈದಾನದಲ್ಲಿ ನಡೆದ ಸಮಾರಂಭ ಮತ್ತು ಪೆರೇಡ್‌ನಲ್ಲಿ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಒಂದೊಂದು ತಂಡಗಳು ಭಾಗವಹಿಸಿದ್ದವು.

ಇದೇ ಸಮಾರಂಭದಲ್ಲಿ ಕರ್ನಾಟಕದ ಘನತೆವೆತ್ತ ರಾಜ್ಯಪಾಲರಾದ ಶ್ರೀಮತಿ ವಿ.ಎಸ್. ರಮಾದೇವಿ ಧ್ವಜಾರೋಹಣ ಮಾಡಿದರು. ಎನ್.ಸಿ.ಸಿ. ಆರಕ್ಷಕದಳ, ಭೂಸೇನೆ, ವಾಯುಸೇನೆ, ಎನ್.ಎಸ್.ಎಸ್. ಹಾಗೂ ಸ್ಕೌಟ್ಸ್ ಗೈಡ್ಸ್ ಕವಾಯತ ಶಿಸ್ತಿನ ಸಂಚಲವನ್ನು ವೀಕ್ಷಿಸಿದರು.

## ಕೇಂದ್ರ ಕಛೇರಿಯಲ್ಲಿ ಧ್ವಜಾರೋಹಣ

ಗಣ ರಾಜ್ಯೋತ್ಸವ ದಿನಾಚರಣೆಯ ಅಂಗವಾಗಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಧ್ವಜಾರೋಹಣ ನೆರವೇರಿಸಿ ನೆರೆದಿದ್ದ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳನ್ನುದ್ದೇಶಿ ಮತನಾಡಿದರು. ರಾಜ್ಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

## ಜಿಲ್ಲಾ ಮಟ್ಟದಲ್ಲಿ ಗಣರಾಜ್ಯೋತ್ಸವ

ಆಯಾ ಜಿಲ್ಲೆಗಳಲ್ಲಿ ಜಿಲ್ಲಾಡಳಿತ ವತಿಯಿಂದ ಏರ್ಪಡಿಸಿದ್ಧ ಸಾರ್ವಜನಿಕ ಗಣರಾಜ್ಯೋತ್ಸವ ಸಮಾರಂಭದಲ್ಲಿ ಆಯಾ ಜಿಲ್ಲಾ ಸ್ಕೌಟ್ ಗೈಡ್‌ಗಳು ಭಾಗವಹಿಸಿರುತ್ತಾರೆ.



*ರಾಯಚೂರು ಜಿಲ್ಲೆಯಲ್ಲಿ ನಡೆದ ಗಣರಾಜ್ಯೋತ್ಸವ ಪರೇಡ್‌ನಲ್ಲಿ ಸಚಿವರಾದ ಶ್ರೀ ಧರಂಸಿಂಗ್‌ರವರು ಸ್ಕೌಟ್ ವಿದ್ಯಾರ್ಥಿಗಳಿಂದ ಗೌರವರಕ್ಷೆ ಪಡೆದರು.*

## ಪಲ್ಸ್ ಪೋಲಿಯೋ ಲಸಿಕಾ ಕಾರ್ಯಕ್ರಮ ತುಮಕೂರು ಜಿಲ್ಲೆ

ಶಿರಾ ತಾಲ್ಲೂಕು ಸ್ಥಳೀಯ ಸಂಸ್ಥೆಯವರು ಸಾರ್ವಜನಿಕ ಆರೋಗ್ಯ ಇಲಾಖೆಯವರ ಸಹಯೋಗದೊಂದಿಗೆ ಈ ಲಸಿಕಾ ಕಾರ್ಯಕ್ರಮವನ್ನು ಯಶಸ್ವಿಯಾಗಿ ನೆರವೇರಿಸಿದರು.

ಹಾಗೂ ಇದೆ ಸಂದರ್ಭದಲ್ಲಿ ತಾಲ್ಲೂಕು ಮಟ್ಟದ ಸ್ಕೌಟ್ ಗೈಡ್ ರ‍್ಯಾಲಿಯನ್ನು ನೆರವೇರಿಸಿದರು.

## ದಾವಣಗೆರೆ ಜಿಲ್ಲೆ

ದಿ. 20.1.2001 ರಂದು ಪಲ್ಸ್ ಪೋಲಿಯೋ ಲಸಿಕಾ ಕಾರ್ಯಕ್ರಮದ ಅಂಗವಾಗಿ ದಾವಣಗೆರೆಯ ಜಿಲ್ಲೆಯ ಕಡತಿ ಗ್ರಾಮದಲ್ಲಿ ಮಹೇಶ್ವರ ಪ್ರೌಢಶಾಲೆಯ ಸ್ಕೌಟ್ ಮಕ್ಕಳೊಂದಿಗೆ ಜನಜಾಗೃತಿಯನ್ನು ಮೂಡಿಸಿರುತ್ತಾರೆ. ಮತ್ತು ದಿ. 21.1.2001 ರಂದು ನಡೆದ ಲಸಿಕಾ ಕಾರ್ಯಕ್ರಮದಲ್ಲಿ ಭಾಗವಹಿಸಿ ಮಕ್ಕಳಿಗೆ ಲಸಿಕೆ ಹಾಕಿಸುವಲ್ಲಿ ಸಹಕರಿಸಿರುತ್ತಾರೆ.



*ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ದಾವಣಗೆರೆ, ಹಾರಪನಹಳ್ಳಿಯ ಮಹದೇಶ್ವರ ಪ್ರೌಢಶಾಲೆಯ ಸ್ಕೌಟ್‌ಗಳು*

## ಬೀದರ್ ಜಿಲ್ಲೆ

ಔರಾದ್ ತಾಲ್ಲೂಕಿನ ಕೇರಡಾ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಸ್ಕೌಟ್ ಮಕ್ಕಳು, ಪಲ್ಸ್ ಪೋಲಿಯೋ ಲಸಿಕಾ ಕಾರ್ಯಕ್ರಮದಲ್ಲಿ ಭಾಗವಹಿಸಿ ಆರೋಗ್ಯ ಇಲಾಖೆಯವರೊಂದಿಗೆ ಮಕ್ಕಳಿಗೆ ಲಸಿಕೆ ಹಾಕುವಲ್ಲಿ ಸಹಾಯಮಾಡಿರುತ್ತಾರೆ



*ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ಬೀದರ್‌ನ ಕೇರಡಾ ಶಾಲೆಯ ಸ್ಕೌಟ್ ಮಕ್ಕಳು.*

# ಜಿಲ್ಲಾ ವಾರ್ತೆಗಳು

## ಚಿಕ್ಕಮಗಳೂರು

ಚಿಕ್ಕಮಗಳೂರು ಜಿಲ್ಲೆಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ವತಿಯಿಂದ ಜಿಲ್ಲಾ ಮೇಳವನ್ನು ಜನವರಿ 5 ರಿಂದ 7

ರವರೆಗೆ ನೇತಾಜಿ ಸುಭಾಷ್ ಚಂದ್ರ ಭೋಸ್ ಕ್ರೀಡಾಂಗಣದಲ್ಲಿ ನಡೆಸಲಾಯಿತು.

ಜಿಲ್ಲೆಯ ನಾನಾ ತಾಲ್ಲೂಕುಗಳಿಂದ ಸುಮಾರು ಒಂದು ಸಾವಿರ ಸ್ಕೌಟ್ಸ್ ಗೈಡ್ಸ್ ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು.

ಮೇಳದ ಉದ್ಘಾಟನೆಯನ್ನು ತಾ: 5-1-2001 ರಂದು ಕರ್ನಾಟಕ ರಾಜ್ಯ ಸಾರಿಗೆ ಸಚಿವರಾದ ಶ್ರೀ. ಸಿ. ಆರ್. ಸಗೀಲ್ ಅಹಮದ್‌ರವರು ನೆರವೇರಿಸಿದರು. ಉದ್ಘಾಟನೆಯನ್ನು ಜಿಲ್ಲಾ ಸಂಸ್ಥೆಗೆ ಸ್ಮರಣೀಯ ಸೇವೆ ಸಲ್ಲಿಸಿದ ಶ್ರೀ ಎಂ. ಹಲಗಪ್ಪ ಮತ್ತು ಶ್ರೀ ಒಲರಾಂಗಿಂಗ್ ಇವರುಗಳ ಭಾವಚಿತ್ರವನ್ನು ಅನಾವರಣ ಮಾಡುವುದರ ಮೂಲಕ ನೆರವೇರಿಸಲಾಯಿತು. ಸ್ಥಳೀಯ ಜನಮಿತ್ರ ಪತ್ರಿಕೆಯ ಸಂಪಾದಕರಾದ ಶ್ರೀ ಎಸ್. ಗಿರಿಜಾಶಂಕರವರು ಮುಖ್ಯ ಅತಿಥಿಯಾಗಿ ಆಗಮಿಸಿದ್ದರು.

ಮೇಳದ ಸಮಾರೋಪ ಭಾಷಣವನ್ನು ಜಿಲ್ಲಾ ಸಂಸ್ಥೆಯ ಅಧ್ಯಕ್ಷರೂ ಮತ್ತು ಜಿಲ್ಲಾಧಿಕಾರಿಗಳು ಆದ ಕೆ.ಹೆಚ್. ಗೋಪಾಲ ಕೃಷ್ಣೇಗೌಡ ರವರು ನೀಡಿದರು. ಸ್ಥಳೀಯ ಮಕ್ಕಳ ತಜ್ಞರಾದ ಡಾ। ಜೆ.ಪಿ. ಕೃಷ್ಣೇಗೌಡ ಮುಖ್ಯ ಅತಿಥಿಯಾಗಿ ಆಗಮಿಸಿದ್ದರು.



ಚಿಕ್ಕಮಗಳೂರು ಜಿಲ್ಲಾಧಿಕಾರಿ ಶ್ರೀ ಕೆ.ಹೆಚ್. ಗೋಪಾಲಕೃಷ್ಣಗೌಡರವರಿಗೆ ಜಿಲ್ಲಾ ಮೇಳದ ಸಂದರ್ಭದಲ್ಲಿ ಜಿಲ್ಲಾ ಆಯುಕ್ತರಾದ ಶ್ರೀ ಬಿ.ಆರ್. ಸಚ್ಚಿದಾನಂದರವರು ಸ್ಕಾರ್ಫ್ ಧರಿಸುತ್ತಿರುವುದು.

ಮೇಳವನ್ನು ಅತ್ಯಂತ ಉಪಯೋಗಕಾರಿ ಮತ್ತು ಆಕರ್ಷಕವಾಗಿ ಮಾಡಲು ಈ ಕೆಳಕಂಡ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿತ್ತು. ಪಥ ಸಂಚಲನ, ಪೆಜೆಂಟ್ ಷೋ, ಸರ್ವಧರ್ಮ ಪ್ರಾರ್ಥನೆ, ಹೈಕ್, ಸ್ಕಿಲ್-ಓ-ರಮ, ಪ್ಲಾಗ್ ಸ್ಟಾಫ್ ಕನ್‌ಸ್ಟ್ರಕ್ಷನ್, ಪಯನೀರಿಂಗ್ ಪ್ರಾಜೆಕ್ಟ್, ಕ್ಲೇ ಮಾಡೆಲಿಂಗ್, ಗಾಳಿಪಟ ಮಾಡಿ ಹಾರಿಸುವುದು, ಹ್ಯಾಂಡಿಕ್ರಾಫ್ಟ್, ವಸ್ತು ಪ್ರದರ್ಶನ, ಸಾಹಸಮಯ ಚಟುವಟಿಕೆಗಳು ಮತ್ತು ಇನ್ನು ಮುಂತಾದ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿತ್ತು.

## ದಾವಣಗೆರೆ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆಯ ವತಿಯಿಂದ ಸಮುದಾಯ ಅಭಿವೃದ್ಧಿ ಶಿಬಿರ ದಿನಾಂಕ : 24.1.2001 ರಿಂದ 26.1.2001 ರವರೆಗೆ ನಡೆಯಿತು. ಈ ಶಿಬಿರದಲ್ಲಿ 92 ಗೈಡ್ಸ್‌ಗಳು ಹಾಗೂ 59 ಸ್ಕೌಟ್ಸ್‌ಗಳು ಭಾಗವಹಿಸಿದ್ದರು.

ದಿನಾಂಕ : 24.1.2001 ರಂದು ಬೆಳಗ್ಗೆ 10.00 ಘಂಟೆಗೆ ಧ್ವಜಾರೋಹಣದೊಂದಿಗೆ ಕಾರ್ಯಕ್ರಮವನ್ನು ಪ್ರಾರಂಭಿಸಿ ಜಿಲ್ಲಾ ಕ್ರಿಮಿನಲ್ ಕೋರ್ಟ್, ಜಿಲ್ಲಾ ಶಿಕ್ಷಕರ ತರಬೇತಿ ಕೇಂದ್ರ, ಜಿಲ್ಲಾ ಪೋಲೀಸ್ ಠಾಣೆ. ಈ ಕಛೇರಿ ಆವರಣ, ಕಛೇರಿ ಒಳಗೆ, ಫೈಲ್ಸ್ ಜೋಡಣೆ, ಸ್ವಚ್ಛತಾ ಕಾರ್ಯಕ್ರಮದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಕೆಲಸ ಮಾಡುವ ವೈಖರಿಯನ್ನು ನೋಡಿ ಜಡ್ಜ, ವಕೀಲರು ತುಂಬಾ ಮೆಚ್ಚುಗೆಯನ್ನು ಸೂಚಿಸಿದರು.

ನಂತರ 25-1-2001 ರಂದು ನಮ್ಮ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಕೆ.ಎಸ್.ಆರ್.ಟಿ.ಸಿ.ಯ ವಿಭಾಗೀಯ ಮುಖ್ಯಸ್ಥರು ಇವರ ಒಪ್ಪಿಗೆಯ ಮೇರೆಗೆ ವಿಭಾಗೀಯ ಕಛೇರಿ, ಪ್ಲಾಟ್ ಪಾರಂ, ಕಛೇರಿ ಆವರಣ, ಎಲ್ಲಾ ಕಡೆಯಲ್ಲೂ ಸ್ವಚ್ಛತೆ ಮಾಡಿ, ರಸ್ತೆ ತೆಗ್ಗುಗಳಿಗೆ ಮಣ್ಣು, ಕಲ್ಲುಗಳನ್ನು ಹಾಕಿ ಮುಚ್ಚಿದರು, ಪ್ರಯಾಣಿಕರಿಗೆ ಲಗೇಜ್ ತೆಗೆದುಕೊಂಡು ಹೋಗಲು ಸಹಾಯ ಮಾಡಿದರು. ಎಲ್ಲಾ ಕೆಲಸಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿದರು ಅಲ್ಲಿನ ಪದಾಧಿಕಾರಿಗಳು ಉತ್ತಮ ಸೇವೆ ಎಂದು ಪ್ರಶಂಸನೀಯ ಮಾತುಗಳನ್ನು ಆಡಿದಿರು. ಶ್ರೀ ಮಹಮದ್ ವಾಸಿಲ್, ಕೇಂದ್ರ ಕಛೇರಿ ಆಯುಕ್ತರು ಬಂದು ಭೇಟಿ ನೀಡಿ ಮಕ್ಕಳನ್ನು ಪ್ರೋತ್ಸಾಹಿಸಿದರು.

## ತುಮಕೂರು ಜಿಲ್ಲೆ

ಕುಣಿಗಲ್ ತಾಲ್ಲೂಕು, ಮತ್ತು ಮಾಯಂಸಂದ್ರ ಹೋಬಳಿಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ರ್‍ಯಾಲಿಯು ಎಡೆಯೂರು ಕ್ಷೇತ್ರದಲ್ಲಿ ನಡೆಯಿತು. ಈ ರ್‍ಯಾಲಿಯಲ್ಲಿ ಸುಮಾರು 500 ಜನ ಮಕ್ಕಳು ಭಾಗವಹಿಸಿದ್ದರು.

ಈ ರ್‍ಯಾಲಿಯ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಕುಣಿಗಲ್ ತಾಲ್ಲೂಕು ಪಂಚಾಯ್ತಿ ಅಧ್ಯಕ್ಷರಾದ ಶ್ರೀ ಬಿ.ಟಿ. ಪುಟ್ಟರಾಮೇ ಗೌಡರು ವಹಿಸಿಕೊಟ್ಟರು. ಈ ಸಂದರ್ಭದಲ್ಲಿ ಜಿಲ್ಲಾ ಪಂಚಾಯ್ತಿ ಸದಸ್ಯರುಗಳು ಮತ್ತು ತಾಲ್ಲೂಕು ಪಂಚಾಯ್ತಿ ಸದಸ್ಯರುಗಳು ಉಪಸ್ಥಿತರಿದ್ದರು ಮತ್ತು ನ್ಯಾಯವಾದಿಗಳಾದ ಶ್ರೀ. ಎ.ಆರ್. ರಂಗಸ್ವಾಮಿಯುವರು ಮಕ್ಕಳನ್ನುದ್ದೇಶಿಸಿ ಮಾತನಾಡಿದರು.

## ಬಳ್ಳಾರಿ ಜಿಲ್ಲೆ

ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಹೊಸಪೇಟೆ ಭುವನಹಳ್ಳಿಯಲ್ಲಿ ದಿ : 6-1-01 ರಿಂದ 10-1-01 ವರೆಗೆ ಸ್ಕೌಟ್ಸ್, ಗೈಡ್ಸ್ ಮಕ್ಕಳಿಂದ ಸಮುದಾಯ ಅಭಿವೃದ್ಧಿ ಸೇವಾ ಶಿಬಿರವನ್ನು ಸಂಘಟಿಸಿದ್ದರು. ಶಾಲೆಗೆ ಹೋಗುತ್ತಿರುವ ಮಕ್ಕಳ ಸಂಖ್ಯೆ ಬಗ್ಗೆ, ಆರೋಗ್ಯ, ನೈರ್ಮಲ್ಯ ಹಾಗೂ ಗಿಡ ನೆಡುವ ಕಾರ್ಯಕ್ರಮ, ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. 450 ಸ್ಕೌಟ್ಸ್ ಮತ್ತು ಗೈಡ್ಸ್ ಭಾಗವಹಿಸಿದ್ದರು. ಆರೋಗ್ಯ ತಪಾಸಣೆಯನ್ನು 5 ಜನ ಕೆಳಕಂಡ ವೈದ್ಯರ ತಂಡ ನಡೆಸಿಕೊಟ್ಟರು.

ಡಾ॥ ಯೋಗಾನಂದರೆಡ್ಡಿ, ಡಾ॥ ಆರ್.ಎಂ. ಸೋಮನಾಥ, ಡಾ॥ ಮಂಜುನಾಥ, ಡಾ॥ ಚಂದ್ರಾರೆಡ್ಡಿ, ಡಾ॥ ಗುರುನಾಥ ಸಾರ್ವಜನಿಕರಿಗೆ ಉಚಿತ ಔಷಧಗಳನ್ನು ನೀಡಿದರು.

## ಉಡುಪಿ ಜಿಲ್ಲೆ

ಜಿಲ್ಲಾ ಮಟ್ಟದ ಸ್ಕೌಟ್ ಗೈಡ್ ಮೇಳ, ಕಬ್, ಬುಲ್ ಬುಲ್ ಉತ್ಸವ, ಜನವರಿ 10, ಮತ್ತು 11 ರಂದು ಎಸ್.ವಿ.ಎಸ್. ಕಾಪು ಸ್ಥಳೀಯ ಸಂಸ್ಥೆ ನೇತೃತ್ವದಲ್ಲಿ ನಡೆಸಿದರು. ನಗರ ಮೆರವಣಿಗೆ ಭವ್ಯ ಶಿಬಿರಗ್ನಿ, ಪಥ ಸಂಚಲನ, ಕಾರ್ಯಕ್ರಮಗಳನ್ನು ಏರ್ಪಡಿಸಿದ್ದರು.

## ಬೆಂಗಳೂರು ಗ್ರಾಮಾಂತರ ಜಿಲ್ಲೆ

ಕನಕಪುರ ಸ್ಥಳಿಯ ಸಂಸ್ಥೆ ಇವರ ಆಶ್ರಯದಲ್ಲಿ ಮಾರಸಂದ್ರ ಗ್ರಾಮದಲ್ಲಿ ಸಮುದಾಯ ಸ್ವಚ್ಛತಾ ಸೇವಾ ಶಿಭಿರವನ್ನು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಸ್ಕೌಟ್ ತಂಡ ನಡೆಸಿತು. ಧ್ವಜಾರೋಹಣ, ಪ್ರಬಾತ್ ಫೇರಿ, ಶಿಬಿರಾಗ್ನಿ ಮುಂತಾದ ಕಾರ್ಯಕ್ರಮಗಳನ್ನು ನಡೆಸಿದರು.

## ಕೊಪ್ಪಳ ಜಿಲ್ಲೆ

ರಾಜ್ಯಮಟ್ಟದ ಫ್ಲಾಕ್ ಲೀಡರ್ಸ್ ಮೂಲ ತರಬೇತಿ ಶಿಬಿಶರವು ಮುನಿರಾಬಾದಿನಲ್ಲಿ ದಿ. 22.1.2001 ರಿಂದ 31.1.2001ರವರೆಗೆ ನಡೆಯಿತು.

ಈ ಶಿಬಿರದಲ್ಲಿ ರಾಜ್ಯದ ವಿವಿಧ ಕಡೆಗಳಿಂದ ಶಿಬಿರಾರ್ಥಿಗಳು ಭಾಗವಹಿಸಿದ್ದರು.

ಶಿಬಿರದ ನಾಯಕರಾಗಿ ಸಿಸ್ಟರ್ ಸಿಸಿಲಿಯೇ ಲೋಬೋ ಕಾರ್ಯ ನಿರ್ವಹಿಸಿದರು.

## ಉತ್ತರ ಕನ್ನಡ ಜಿಲ್ಲೆ

ದಿ. 13.1.2001ರಂದು ಜನತಾ ವಿದ್ಯಾಲಯ ಬಾಡನದಲ್ಲಿ ಸ್ಕೌಟ್ ಮತ್ತು ಗೈಡ್ ಕಾರ್ಯಾಗಾರ ಹಾಗೂ ದೀಕ್ಷಾ ಸಮಾರಂಭ ನಡೆಯಿತು. ಈ ಸಂದರ್ಭದಲ್ಲಿ ಮಕ್ಕಳಿಗೆ ಸಮುದಾಯ ಸೇವೆಯ ಮಹತ್ವವನ್ನು ತಿಳಿಯ ಪಡಿಸಲಾಯಿತು.



*ಉತ್ತರ ಕನ್ನಡ ಜಿಲ್ಲೆಯ ಜನತಾ ವಿದ್ಯಾಲಯದಲ್ಲಿ ನಡೆದ ಸ್ಕೌಟ್ಸ್, ಗೈಡ್ಸ್ ಕಾರ್ಯಗಾರದಲ್ಲಿ ಭಾಗವಹಿಸಿದ ಸ್ಕೌಟ್, ಗೈಡ್ಸ್ ಮಕ್ಕಳು*

ಹೊನ್ನಾವರ ತಾಲ್ಲೂಕು ಹಳದೀಪುರದಲ್ಲಿ ದಿ. 5.1.2001 ಮತ್ತು 6.1.2001ರಂದು ಎರಡು ದಿವಸ ಜಿಲ್ಲಾ ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಕಾರ್ಯಾಗಾರ ನಡೆಯಿತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಆಯುಕ್ತರಾದ ಶ್ರೀ ಜಿ.ಜಿ. ಸಭಾಹಿತ್‌ರವರು ವಹಿಸಿದ್ದರು. ಈ ಕಾರ್ಯಾಗಾರದ ನಾಯಕತ್ವವನ್ನು ಶ್ರೀ ಆರ್.ಟಿ. ಹೆಬ್ಬಾರ್‌ರವರು ವಹಿಸಿದ್ದರು.

## ರಾಯಚೂರು ಜಿಲ್ಲೆ

ರಾಯೂಚುರ ಜಿಲ್ಲಾ ಸಂಸ್ಥೆ ಇವರು ದಿನಾಂಕ : 17.1.2001 ರಿಂದ 21.1.2001ರ ವರೆಗೆ ಸ್ಕೌಟ್ಸ್ ಮತ್ತು ಗೈಡ್ಸ್ ಪದಕಗಳ ಕಾರ್ಯಾಗಾರ ಶಿಬಿರವನ್ನು ಸರಕಾರಿ ಪ್ರೌಢಶಾಲೆ, ಕೆ.ಇ.ಜಿ. ರಾಯಚೂರು ಆವರಣದಲ್ಲಿ ಹಮ್ಮಿಕೊಳ್ಳಲಾಗಿತ್ತು. ದಿನಾಂಕ : 17.1.2001 ರಂದು ಬೆಳಿಗ್ಗೆ 8 ಗಂಟೆಗೆ ಧ್ವಜಾ ರೋಹಣದೊಂದಿಗೆ ಪ್ರಾರಂಭವಾದ ಈ ಶಿಬಿರ ಐದು ದಿನಗಳ ಕಾಲ ಎ.ಪಿ.ಆರ್.ಓ. 2 ಮತ್ತು 3ರ ಪ್ರಕಾರ ಹಲವಾರು ಚಟುವಟಿಕೆಗಳನ್ನು ಹಾಗೂ ನುರಿತ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್ನರೊಂದಿಗೆ ಬೋಧನೆಯನ್ನು ನೀಡಲಾಯಿತು. ಶಿಬಿರದಲ್ಲಿ ಮುಖ್ಯವಾಗಿ ಬೇಸ್ ಪದ್ಧತಿ, ನಕ್ಷೆಯ ಉಪಯೋಗ, ಗಂಟುಗಳನ್ನು ಹಾಕುವ ಪದ್ಧತಿ, ಪ್ರಥಮ ಚಿಕಿತ್ಸೆ, ಬಿ.ಪಿ. ಸಿಕ್ಸ್, ವನ ವಿದ್ಯಾ ಸಂಕೇತ, ಹೈಕ್ ಮೊದಲಾದವುಗಳ ಬಗ್ಗೆ ವಿವರವಾಗಿ ಮಕ್ಕಳಿಗೆ ತಿಳಿಸಲಾಯಿತು. ದಿನಾಂಕ : 20.1.2001 ರಂದು ಸಮಾರೋಪ ಸಮಾರಂಭವನ್ನು ಆದ್ದೂರಿಯಿಂದ ಆಚರಿಸಲಾಯಿತು.

## ಹಾವೇರಿ ಜಿಲ್ಲೆ

### ಜಿಲ್ಲಾ ಮೇಳ ಹಾಗೂ ಜಿಲ್ಲಾ ಪುರಸ್ಕಾರ ಕಾರ್ಯಕ್ರಮ

ಹಾವೇರಿ ಜಿಲ್ಲಾ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಆಶ್ರಯದಲ್ಲಿ ಜಿಲ್ಲಾ ಮಟ್ಟದ ಮಕ್ಕಳ ಮೇಳ ಹಾಗೂ ಜಿಲ್ಲಾ ಪುರಸ್ಕಾರ 23.1 .2001 ರಿಂದ 26.01.2001ರವರೆಗೆ ಕಾರ್ಯಕ್ರಮ ನಡೆದವು.

ಜಿಲ್ಲಾ ಪಂಚಾಯತ್ ಅಧ್ಯಕ್ಷ ಕೊಟ್ರೇಶಪ್ಪ ಬಸೆಗಣ್ಣಿ ಮೇಳ ಉದ್ಘಾಟಿಸಿ ಸ್ಕೌಟಿನ ಮೂಲಭೂತ ತತ್ವಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡು ಬಾಳ ಬೆಳಗಿಸಿಕೊಳ್ಳಬೇಕೆಂದು ಹೇಳಿದರು. ಮುಖ್ಯ ಅತಿಥಿಯಾಗಿ ಸಿ.ವಿ. ಅಂಗಡಿ ಮಾತನಾಡಿ ಸ್ಕೌಟಿನ ಜನಕ ಲಾರ್ಡ್ ಬೇಡನ್ ಪೋವೆಲ್ಲರ ಜೀವನ ಸಾಧನೆ ವಿವರಿಸಿದರು. ಕ್ಷೇತ್ರ ಶಿಕ್ಷಣಾಧಿಕಾರಿ ಎ.ಎಂ. ಅಕ್ಕಿ, ಸಿಸ್ಟರ್ ಶೇರ್ಲಿ ಥಾಮಸ್ ಗೈಡ್ ಕಮೀಶನರ್ ಮಾಧರಿ ದೇವಧರ, ದೈಹಿಕ ಶಿಕ್ಷಣಾಧಿಕಾರಿ ಕೆ.ಎಂ. ಕುಂಠೆ, ಎಂ.ಬಿ. ಭಜಂತ್ರಿ ಮುಂತಾದವರು ಇದ್ದರು.

26.01.01 ರಂದು ಜಿಲ್ಲಾಧಿಕಾರಿ ಕಚೇರಿಯಲ್ಲಿ ಆಯೋಜನೆ ಗೊಂಡಿದ್ದ ಸಮಾರೋಪ ಸಮಾರಂಭದಲ್ಲಿ ಶಾಸಕರಾದ ಕೆ.ಬಿ. ಕೋಲಿವಾಡ, ರುದ್ರಪ್ಪಲಮಾಣಿ, ಅಜ್ಜಂಪೀಠ ಖಾದ್ರಿ, ಬಿ.ಎಚ್. ಬನ್ನಿಕೋಡ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಬಿ. ಶಿವಪ್ಪ ಡಿ.ಪಿ.ಪಿ.ಐ. ಎ.ವಿ. ಪಾರ್ಶಿ ಜಿಲ್ಲಾ ಸ್ಕೌಟ ಚೇರಮನ್

ಪ್ರಭಾಕರರಾವ್ ಮಂಗಳೂರು, ಉಪಾಧ್ಯಕ್ಷ ಮೋಹನ ಮೆಣಸಿನಕಾಯಿ, ಕೆ.ಸಿ. ಕೋರಿ ಮಕ್ಕಳಿಗೆ ಜಿಲ್ಲಾ ಪುರಸ್ಕಾರ ಪ್ರಶಸ್ತಿ ಪ್ರದಾನ ಮಾಡಿದರು.

ನಾಲ್ಕು ದಿನ ಮೇಳದಲ್ಲಿ ಎಲ್ಲ ತಾಲೂಕುಗಳಿಂದ 170 ಮಕ್ಕಳು ಸೇರಿದಂತೆ 30 ಜನ ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು. ಗಣರಾಜ್ಯೋತ್ಸವದಂದು ಪಥ ಸಂಚಲನದಲ್ಲಿತೃತೀಯ ಸ್ಥಾನ ಪಡೆದು ಉಸ್ತುವಾರಿ ಸಚೀವರಾದ ಶ್ರೀ ಸಗೀರ ಅಹ್ಮದರವರಿಂದ ಬಹುಮಾನ ಪಡೆಯಲಿಕ್ಕೆ ಪಾತ್ರರಾದರು ಹಾಗೂ ಸಾಂಸ್ಕೃತಿಕ ಚಟುವಟಿಕೆಗ ಜನಮನ ಗೆದ್ದವು.

ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಎ.ಎಲ್. ಶೇಖಸೂರಣಗಿ ಸಹಾಯ ಸಹಕಾರ ನೀಡಿದ 7 ತಾಲ್ಲೂಕಿನ ಕಾರ್ಯದರ್ಶಿಗಳಿಗೆ ಅಭಿನಂದನೆ ಹೇಳಿದರು. ಡಿ.ಟಿ.ಸಿ. (ಜಿ) ಉಮಾ ಮರಗೆಂಚಣ್ಣನವರ ಸ್ವಾಗತಿಸಿದರು. ಜಿಲ್ಲಾ ಕಾರ್ಯದರ್ಶಿ ಎಂ. ಆರ್. ಪಾಟೀಲರು ವಂದಿಸಿದರು.

## ಗದಗ ಜಿಲ್ಲೆ

ನರಗುಂದ ತಾಲೂಕ ಆಶ್ರಯದಲ್ಲಿ ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್‌ಬುಲ್ಸ್ ಮಕ್ಕಳ ಮೇಳವನ್ನು ದಿ.29.1.2001 ರಿಂದ 31.2.2001 ಶ್ರೀ ಬಸವೇಶ್ವರ ದೇವಸ್ಥಾನದ ಆವರಣ, ಕಲ್ಲಾಪುರದಲ್ಲಿ ನಡೆಸಿದರು. ಮೇಳದ ಉದ್ಘಾಟನೆಯನ್ನು ತಾಲೂಕು ಶಾಸಕರಾದ ಶ್ರೀ ಬಿ.ಆರ್. ಯಾವಗಲವ ಹಾಗೂ ಸಮಾರಂಭ ಅಧ್ಯಕ್ಷತೆಯನ್ನು ತಾಲೂಕು ಪಂಚಾಯತದ ಉಪಾಧ್ಯಕ್ಷರಾದ ಶ್ರೀ ಎಸ್.ಎಂ. ಮುಳಗುಂದ, ಅತಿಥಿಗಳಾಗಿ ಶ್ರೀ ಚಿದ್ರೆ ಶಂಕ್ರಯ್ಯ ಸ್ವಾಮಿ , ಡಿ.ಡಿ.ಪಿ.ಐ, ಗದಗ ಜಿಲ್ಲೆ ಇವರು ನಡೆಸಿಕೊಟ್ಟರು.

ಈ ಸಮಾರಂಭದಲ್ಲಿ ಶ್ರೀ ಜಿ. ಚೋಳಿನ ಕೋಶಾಧ್ಯಕ್ಷರು. ಗದಗ ಜಿಲ್ಲೆ ಶ್ರೀ ಟಿ.ಜಿ. ಸಯ್ಯದ ಬಿ.ಇ.ಓ. ನರಗುಂದ ಶ್ರೀ ಎಂ.ಎಂ. ಕಲಹಾಲ. ಶ್ರೀ ಎಂ.ಆರ್.ಕಾಳೆ ನಿವೃತ್ತ ಎ.ಇ.ಓ. ನರಗುಂದ, ಶ್ರೀ ಬಿ.ಎಸ್. ಭೂಸರೆಡ್ಡಿ, ಶ್ರೀ ಶಂಕರಯ್ಯ ಹಿರೇಮಠ ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಸ್ಕೌಟ್ಸ್, ಗೈಡ್ಸ್ ಮಕ್ಕಳಿಂದ ಶ್ರಮದಾನ, ರಾತ್ರಿ ಶಿಬಿರಾಗ್ನಿ ಸಾಹಸ ಚಟುವಟಿಕೆಗಳು, ಕರಕುಶಲ, ಕಾರ್ಯಗಳು ಹಾಗೂ ರಾಜ್ಯ ಪುರಸ್ಕಾರ ಪಡೆದ ಮಕ್ಕಳಿಗೆ ಸನ್ಮಾನ ಮಾಡಲಾಗಿದೆ.

## ಕೊಪ್ಪಳ ಜಿಲ್ಲೆ

ಕೊಪ್ಪಳ ಜಿಲ್ಲಾಮಟ್ಟದ ಅಧ್ಯಯನ ಸಭೆನ್ನು ಸ್ಕೌಟರ್ಸ್‌ಗಾಗಿ ದಿನಾಂಕ 2.1.2001 ರಂದು ಗುರುಭವನ ಕುಷ್ಟಗಿಯಲ್ಲಿ ಯಲಬುರ್ಗಾ ಹಾಗೂ ಕುಷ್ಟಗಿ ತಾಲ್ಲೂಕಿನ ಸ್ಕೌಟರ್ಸ್‌ಗಳಿಗೆ ಏರ್ಪಡಿಸಿತು. ದಿನಾಂಕ 3.1.2001 ಕೊಪ್ಪಳ ಹಾಗೂ ಗಂಗಾವತಿ ತಾಲ್ಲೂಕಿನ ಸ್ಕೌಟ ಶಿಕ್ಷಕರಿಗೆ, ಲಯನ್ಸ್ ಕ್ಲಬ್ ಗಂಗಾವತಿಯಲ್ಲಿ ನಡೆಸಲಾಯಿತು ಶ್ರೀ ಪಿ. ಮಂಜುನಾಥ ಎಎಲ್‌ಟಿ(ಎಸ್) ಹೊಸಪೇಟೆ, ಸ್ಕೌಟರ್ಸ್‌ಗೆ ಮಾಹಿತಿ ನೀಡಲು ಆಗಮಿಸಿದ್ದರು.

ಜಿಲ್ಲಾ ಸಂಘಟನಾ ಆಯುಕ್ತರಾದ ಜಯರಾಜ ಬೂಸ್‌ದ್ ಹಾಗೂ ತರಬೇತಿ ಆಯುಕ್ತರಾದ ಯರಣ್ಣ ವ್ಯವಸ್ಥೆಗೊಳಿಸಿದ್ದರು.

ಸಭೆಗೆ, ಉಪಾಧ್ಯಕ್ಷರಾದ ಶ್ರೀ ಸಿದ್ದರಾಮಯ್ಯ ಹಾಗೂ ಶ್ರೀಮತಿ ಹೇಮಲತಾ ಆಗಮಿಸಿದ್ದರು, ಅಲ್ಲದೆ ಶ್ರೀ ಚನ್ನಬಸಪ್ಪ, ಶ್ರೀ ಮೊಹಮ್ಮದ ಗುತ್ತಿ ಮುಂತಾದವರು ಭಾಗವಹಿಸಿದ್ದರು.

## MYSORE RURAL

### Governor's Visit



Smt. V.S. Rama Devi, Her Excellency the Governor of Karnataka and the Patron of the Bharat Scouts and Guides, visited the comporee organised by Mysore Rural Distriet on 5.1.2001 at Nanjanagud.

Sri B.V. Balalsubramaniam, Dist Commissioner (S) Smt. Vijaya N. Swamy Dist Commissioner (G) along with other District Officials were present. 350 Scouts and Guides attended the camporee, A cultural programme was conducted on 4.1.2001. A Seminar was conducted and 75 teachers participated.

### Mysore City

The District rally was held on 6.1.2001. Sri B. Basavaraj I.A.S., Deputy Commissioner, Mysore inaugurated. the Rally Sri H.S. Shankaralingegowda M.L.A., Mysore presided. 73 scouts and guides participated in the Rally. Various activities were conducted for cub, Bul Buls, Scouts and Guides.

Dr. H.M. Nagaraju Deputy Director, Pre-university Education delivered the valedictory address.

Sri P. Viswanath, Dr. R. Lalitha District Commissioners and Dr. K.B. Gurumurthy Dist secretary were present.

# SCOUTS & GUIDES OBSERVED WORLD SCOUT/THINKING DAY

The Bharat scouts and Guides Karnataka organised this special programme at Shanthi Gruha, Palace Road, Bangalore on Thursday the 22nd February, 190 Scouts, Guides, Cubs and Bulbuls along with Unit Leaders from the following Schools participated in this programme.

1. Stella Maris Girls High School Bangalore North
2. Ravi English School Bangalore North
3. Gayathri Guide Company Open Unit, Bangalore South
4. Issac Newton School, Bangalore South
5. Carmel School, Bangalore South

The programme commenced with prayer, followed by floral tribute to Lord and Lady Baden Powell by Scouts and Guides to show their love and regards.

As a part of the ceremony 10 Scouts and Guides were selected to represent the member countries of WAGGGS and WOSOM. They brought with them their National flags.

Ten Guides spoke about the activities of various stages of youth and how it helps in the development of character to become a responsible citizen.

Sri T.S. Lucas State Secretary, The Bharat Scouts and Guides and Miss Ravi Wesley Headquarters Commissioner (Guides) released Two doves symbolising peace.



*Participation of Scouts and Guides during the observance of World Scout/Thinking Day Celebration*

Quiz on WOSM and WAGGGS was conducted. As a part of nature lore activity, different animal paper cut outs were distributed to all the Scouts and Guides to paint with Natural colours. Scouts and Guides enjoyed this activity well.

A collecton was made towards the Thinking Day Fund. The programme concluded with the renewal of the Promise.

## ಆಯುಕ್ತರು ಮತ್ತು ಕಾರ್ಯದರ್ಶಿಗಳ ಸಮಾವೇಶ

ರಾಜ್ಯಮಟ್ಟದ ಆಯುಕ್ತರ ಮತ್ತು ಕಾರ್ಯದರ್ಶಿಗಳ ಸಮಾವೇಶವು 4.2.2001 ರಂದು ಬೆಂಗಳೂರಿನ ಕೇಂದ್ರ ಕಚೇರಿಯಲ್ಲಿ ನಡೆಯಿತು. ಸಮಾವೇಶದ ಅಧ್ಯಕ್ಷತೆಯನ್ನು ರಾಜ್ಯದ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ವಹಿಸಿದ್ದು, ಈ ಕೆಳಕಂಡ ವಿಷಯಗಳ ಬಗ್ಗೆ ಚರ್ಚೆ ನಡೆಸಿದರು-

1. ಜಿಲ್ಲಾ ಮಟ್ಟದ ಗಣತಿ
2. ಜಿಲ್ಲಾ ಕಾರ್ಯಕ್ರಮ ಮತ್ತು ಚಟುವಟಿಕೆಗಳು
3. ಜಿಲ್ಲೆಗೊಂದು ಶಿಬಿರ ಸ್ಥಾನ
4. ಜಿಲ್ಲೆಗೊಂದು ವಾರ್ತಾ ಪತ್ರ.

ಹಾಗೂ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಯ ಸರ್ವತೋಮುಖ ಅಭಿವೃದ್ಧಿ ಮತ್ತು ಪ್ರಗತಿಯ ಬಗ್ಗೆ ಆಳವಾಗಿ ಚರ್ಚಿಸಲಾಯಿತು.

## ರಾಜ್ಯ ಯೋಜನಾ ಸಮಿತಿ ಸಭೆ

ರಾಜ್ಯ ಮಟ್ಟದ ಯೋಜನಾ ಸಮಿತಿ ಸಭೆ ದಿ. 4..2.2001 ರಂದು ಕೇಂದ್ರ ಕಛೇರಿಯಲ್ಲಿ ನಡೆಸಲಾಯಿತು. ಸಭೆಯ ಅಧ್ಯಕ್ಷತೆಯನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ವಹಿಸಿದ್ದು, ಸಭೆಯಲ್ಲಿ 2000-2001ನೇ ಸಾಲಿನ ಸ್ಕೌಟ್ಸ್ ಮತ್ತು ಗೈಡ್ಸ್‌ನ ಚಟುವಟಿಕೆಗಳ ಬಗ್ಗೆ ಸಿಂಹಾವಲೋಕನ ನಡೆಸಿತು. 2001-2002 ಸಾಲಿನ ಮುಂಗಡ ಯೋಜನಾ ಚಟುವಟಿಕೆಗಳನ್ನ ಪರಿಶೀಲಿಸಿ ಕಾರ್ಯಕ್ರಮ ಯಶಸ್ವಿಯಾಗಿ ನಡೆಸಲು ಯೋಜಿಸಲಾಯಿತು. ಜಿಲ್ಲಾಮಟ್ಟದಲ್ಲಿ ಚಟುವಟಿಕೆಗಳನ್ನು ಹೆಚ್ಚಿಸಲೂ ತೀರ್ಮಾನಕ್ಕೆಗೊಳ್ಳಲಾಯಿತು.

ಇದೇ ಸಂದರ್ಭದಲ್ಲಿ ರಾಜ್ಯ ಸಹಾಯಕ ಸಂಘಟನಾ ಆಯುಕ್ತರ ಮತ್ತು ಜಿಲ್ಲಾ ಸಂಘಟನಾ ಆಯುಕ್ತರ ಸಭೆಯನ್ನು ನಡೆಸಲಾಯಿತು.

## ಗುಜರಾತ್ ಭೂಕಂಪ ಪರಿಹಾರ ನಿಧಿ

### ವಿಜಾಪುರ ಜಿಲ್ಲೆ

ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆ, ನಿಲಗುಂದಿ ಇಲ್ಲಿನ ವಿದ್ಯಾರ್ಥಿಗಳು ಹಾಗೂ ಸ್ಕೌಟ್‌ಗಳು ಗುಜರಾತ್ ಭೂಕಂಪ ಸಂತ್ರಪ್ತರ ನಿಧಿಗೆ ರೂ 10,000 (ಹತ್ತು ಸಾವಿರಗಳು) ಸಂಗ್ರಹಿಸಿ ಜಿಲ್ಲಾಧಿಕಾರಿಗಳಿಗೆ ನೀಡಿದ್ದಾರೆ.

### ಶಿವಮೊಗ್ಗ ಜಿಲ್ಲೆ

ಇಲ್ಲಿನ ಮಲ್ನಾಡು ಸ್ಕೌಟ್ಸ್ ತಂಡದ ವತಿಯಿಂದ ಗುಜರಾತ್ ಸಂಕಷ್ಟ ಪರಿಹಾರ ನಿಧಿಗೆ ನಾಲ್ಕು ಕ್ವಿಂಟಾಲ್ ಅಕ್ಕಿ ಮತ್ತು ಇತರೆ ಆಹಾರ ಪದಾರ್ಥಗಳನ್ನು ಕಳಿಸಿ ಕೊಡಲಾಯಿತು.

### ಬೆಂಗಳೂರು ದಕ್ಷಿಣ ಜಿಲ್ಲೆ

ಚಾಮರಾಜ ಪೇಟೆ ಸ್ಥಳೀಯ ಸಂಸ್ತೆಯ ಝಾನ್ಸಿ ಸ್ಕೌಟ್ ಮತ್ತು ಗೈಡ್ಸ್ ತಂಡದವರು ಭೂಕಂಪ ಪರಿಹಾರ ನಿಧಿಗೆ ರೂ. 8,300/- ಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ.

### ಗದಗ ಜಿಲ್ಲೆ

ಎಸ್.ಜೆ.ಜೆ.ಎಂ. ಪದವಿ ಪೂರ್ವ ಕಾಲೇಜು ಮುಳಗುಂದ ಇಲ್ಲಿನ ಸ್ಕೌಟ್ ಮತ್ತು ಗೈಡ್ ಮಕ್ಕಳು ರೂ 38,030 ಗಳನ್ನು ಸಂಗ್ರಹಿಸಿ ಭೂಕಂಪ ಪರಿಹಾರ ನಿಧಿಗೆ ಸಂಯುಕ್ತ ಕರ್ನಾಟಕ ದಿನಪತ್ರಿಕೆಯ ಮೂಲಕ ನೀಡಿದ್ದಾರೆ.



*ಗುಜರಾತ್ ಭೂಕಂಪ ಪೀಡಿತರಿಗೆ ನೆರವು ನಿಡಲು ನಿಧಿ ಸಂಗ್ರಹಣೆಯಲ್ಲಿ ತೊಡಗಿರುವ ಗದಗ ಎಸ್.ಜೆ.ಜೆ.ಎಂ. ಪದವಿಪೂರ್ವ ಕಾಲೇಜಿನ ಸ್ಕೌಟ್ ಮಕ್ಕಳು*

ಇದೇ ರೀತಿ ವಿವಿಧ ಜಿಲ್ಲೆಗಳಿಂದ ಗುಜರಾತ್ ಭೂಕಂಪ ಪರಿಹಾರ ನಿಧಿಗೆ ಸುಮಾರು 10 ಲಕ್ಷ ರೂಪಾಯಿಗಳಷ್ಟು ಮೌಲ್ಯದ ಹಣ ಹಾಗೂ ವಸ್ತುಗಳನ್ನು ಸಂಗ್ರಹಿಸಿ ಗುಜರಾತ್ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆಯವರಿಗೆ ನೀಡಿದ್ದಲ್ಲದೆ. ಬೇರೆ ಬೇರೆ ಜಿಲ್ಲಾಧಿಕಾರಿಗಳ ಮುಖಾಂತರ ಪ್ರಧಾನ ಮಂತ್ರಿಗಳ ಸಂಕಷ್ಟ ಪರಿಹಾರ ನಿಧಿಗೂ ಹಣ ಮತ್ತು ವಸ್ತುಗಳನ್ನು ಸಲ್ಲಿಸಲಾಗಿದೆ.

### ದಾವಣಗೆರೆ ಜಿಲ್ಲೆ

8.000 ರೂಪಾಯಿಗಳನ್ನು ದಾವಣಗೆರೆ ಜಿಲ್ಲೆಯಿಂದ ಗುಜಾರತ್ ಭೂಕಂಪ ನಿಧಿಗೆ ಕಳುಹಿಸಲಾಗಿದೆ.

### Bangalore

The Karnataka unit of the Bharat Scouts and Guides and staff and students of the Sri Vidyamandir Education Society, Malleswaram have collected relief materials for the quake victims and sent them by a train to Ahmedabad on February 9.

Rice, wheat, sugar, dal and medicines weighing about 5,470 kg and 190 bags of clothing such as bed-sheets, sweater, blankets and clothes were despatched. The materials would be distributed in the villages adopted by the Gujarat branch of Bharat Scouts and Guides.

*- Deccan Herald, News Service Feb 12.*



*Scouts and Students, Secretary of Sri Vidya Mandir School at the city Railway station to despatch the goods to Gujarat*

**Wake up! Get Busy! You have only one life-day to Live. So make the best of every minute of it.**

**- Lord Baden Powell**

# ಜಿಲ್ಲಾ ವರದಿ

## ಹಾಸನ ಜಿಲ್ಲೆ

ಹಾಸನ ಜಿಲ್ಲೆಯ ಹೊಳೆನರಸೀಪುರ ತಾಲ್ಲೋಕು ಸ್ಥಳೀಯ ಸಂಸ್ಥೆಯ ವತಿಯಿಂದ ದಿನಾಂಕ 21.2.2001 ರಂದು ಬೇಡನ್ ಪೊವೆಲ್‌ರವರ ಜನ್ಮದಿನಾಚರಣೆಯನ್ನು ಮೂಡಲ ಹಿಪ್ಪೆಯ ಸರ್ಕಾರಿ ಪ್ರೌಢ ಶಾಲಾ ಆವರಣದಲ್ಲಿ ಆಚರಿಸಲಾಯಿತು. ಪ್ರೌಢಶಾಲೆಯ ಮುಖ್ಯ ಶಿಕ್ಷಕರಾದ ಕೆ. ನಾಗಾರಜುರವರು ಅಧ್ಯಕ್ಷತೆ ವಹಿಸಿದ್ದರು. ಸ್ಥಳೀಯ ವರ್ತಕರಾದ ಶ್ರೀ ಶಂಕರ್‌ರವರು, ಗ್ರಾಮ ಪಂಚಾಯ್ತಿ ಸದಸ್ಯರಾದ ಶ್ರೀ ನಾಗೇಶ್‌ರವರು ಹಾಗೂ ಕಾರ್ಗಿಲ್ ಯೋಧರಾದ ಶ್ರೀ ಗಣೇಶ್‌ರವರು ಸಮಾರಂಭದಲ್ಲಿ ಭಾಗವಹಿಸಿದ್ದರು. ತಾಲ್ಲೂಕಿನ 10 ಶಾಲೆಗಳ ಮಕ್ಕಳು ಹಾಗೂ ಶಿಕ್ಷಕರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ಹಾಸನ ಜಿಲ್ಲಾ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳ:

ದಿನಾಂಕ : 23.2.2001 ರಂದು ಮತ್ತು 24.2.2001 ರಂದು ಹಾಸನ ಜಿಲ್ಲಾ ಸ್ಕೌಟ್ ಭವನದ ಆವರಣದಲ್ಲಿ ಜಿಲ್ಲಾ ಮಟ್ಟದ ಸ್ಕೌಟ್ಸ್ ಗೈಡ್ಸ್ ಕಬ್ಸ್ ಮತ್ತು ಬುಲ್‌ಬುಲ್ಸ್ ಮೇಳವನ್ನು ಹಾಸನ ತಾಲ್ಲೋಕ್ ಸ್ಥಳೀಯ ಸಂಸ್ಥೆಯಿಂದ ಏರ್ಪಡಿಸಲಾಗಿತ್ತು.

ಈ ರ್‍ಯಾಲಿಯಲ್ಲಿ ಜಿಲ್ಲಾದ್ಯಂತ ಒಟ್ಟು 900 ಸ್ಕೌಟ್ಸ್-ಗೈಡ್ಸ್ ಮಕ್ಕಳು ಭಾಗವಹಿಸಿದ್ದರು. ರ್‍ಯಾಲಿಯಲ್ಲಿ ಉದ್ಘಾಟನೆಯನ್ನು ಹೆಚ್.ಎಸ್. ಪ್ರಕಾಶ್ ಮಾಜಿ ಶಾಸಕರು ಹಾಸನ ಇವರು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಎಂ.ಎ. ಚಲ್ಲಯ್ಯ, ಕೇಂದ್ರ ಸ್ಥಾನಿಕ ಆಯುಕ್ತರು ಸಾರ್ವಜನಿಕ ಸಂಪರ್ಕ ರಾಜ್ಯ ಸಂಸ್ಥೆ, ಬೆಂಗಳೂರು. ಶ್ರೀಮತಿ ಪಿ.ಸರೋಜ, ರಾಜ್ಯ ಸಂಘಟನಾಧಿಕಾರಿಗಳು (ಗೈಡ್ಸ್) ಶ್ರೀಮತಿ ನೂರ್ ಜಹಾನ್ ಬಿ.ಡಿ.ಸಿ. (ಗೈ), ಶ್ರೀ ವೈ.ಎಂ. ಚನ್ನವೀರಪ್ಪ, ಅಧ್ಯಕ್ಷರು ಸಿಟಿ ಕೋ ಆಪರೇಟೀವ್ ಬ್ಯಾಂಕ್ ಹಾಸನ ಇವರು ಉಪಸ್ಥಿತರಿದ್ದರು. ಶ್ರೀ ಹೆಚ್.ಆರ್. ಬಸಪ್ಪ ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ಅಧ್ಯಕ್ಷರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಇವರ ಅಧ್ಯಕ್ಷತೆಯಲ್ಲಿ ಉದ್ಘಾಟನಾ ಸಮಾರಂಭ ಯಶಸ್ವಿಯಾಗಿ ನಡೆಯಿತು.



ಹಾಸನ ಜಿಲ್ಲಾ ಮಟ್ಟದ ರ್‍ಯಾಲಿಯಲ್ಲಿ ವಸ್ತು ಪ್ರದರ್ಶನದಲ್ಲಿ ಪಾಲ್ಗೊಂಡಿರುವ ಸ್ಕೌಟ್‌ಗಳು

ದಿನಾಂಕ : 23 ರಂದು ಸಂಜೆ 7 ಗಂಟೆಗೆ ಭವ್ಯ ಶಿಬಿರಾಗ್ನಿ ಕಾರ್ಯಕ್ರಮವನ್ನು ಶ್ರೀ ಎಸ್. ತಾಂಡವಮೂರ್ತಿ ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಹಾಸನ ಇವರು ಉದ್ಘಾಟನೆ ಮಾಡಿದರು.

ದಿನಾಂಕ : 24.2.2001 ರಂದು ಬೆಳಿಗ್ಗೆ 7-30ಕ್ಕೆ ಸರ್ವಧರ್ಮ ಸಮನ್ವಯ ಪ್ರಾರ್ಥನೆ ಶ್ರೀ ಎ.ವಿ. ರಮೇಶ್ ಜಿಲ್ಲಾ ಕಾರ್ಯದರ್ಶಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ಇವರ ಸಮ್ಮುಖದಲ್ಲಿ ನಡೆಸಲಾಯಿತು.

ದಿನಾಂಕ : 24.2.2001 ರಂದು ಬೆಳಿಗ್ಗೆ 10 ಗಂಟೆಗೆ ನಗರ ಪ್ರಮುಖ ಬೀದಿಗಳಲ್ಲಿ ಯುನೈಟೆಡ್ ಅಕಾಡೆಮಿ ಶಾಲೆಯ ಆಕರ್ಷಕ ಬ್ಯಾಂಡ್‌ನೊಂದಿಗೆ ಹಾಗೂ ಎನ್.ಇ. ಮಿಶ್ರ ಪೆನಪೆನ್‌ಮೊಹಲ್ಲ ಶಾಲೆಯ ಸ್ಕೌಟ್ ಬ್ಯಾಂಡ್‌ನೊಂದಿಗೆ ಆಕರ್ಷಕ ಪಥ ಸಂಚಲನ ಏರ್ಪಡಿಸಲಾಗಿತ್ತು. ಪಥ ಸಂಚಲನವನ್ನು ಶ್ರೀ ಸುರೇಂದ್ರ ರಾವ್ ಠಾಣ್ಗೆ ವರ್ತಕರು, ಹಾಸನ ಇವರು ಉದ್ಘಾಟನೆ ಮಾಡಿದರು.

ದಿನಾಂಕ : 24.2.2001 ರಂದು ಮಧ್ಯಾಹ್ನ 3 ಗಂಟೆಗೆ ಸಾಂಸ್ಕೃತಿಕ ಕಾರ್ಯಕ್ರಮ ನಡೆಯಿತು. ರಾಜ್ಯ ತರಬೇತಿ ಆಯುಕ್ತರಾದ ಶ್ರೀ ನಾರಾಯಣ ಶೆಟ್ಟಿರವರು ಸಾಂಸ್ಕತಿಕ ಕಾರ್ಯಕ್ರಮ ಉದ್ಘಾಟನೆ ಮಾಡಿದರು. ನಂತರ ಮಧ್ಯಾಹ್ನ 4 ಗಂಟೆಗೆ ಸಮಾರೋಪ ಸಮಾರಂಭ ಶ್ರೀ ಬಿ.ಆರ್. ವಾಸುದೇವ್ ಅಧ್ಯಕ್ಷರು ಶಿಕ್ಷಣ-ಸ್ಥಾಯಿತಿ ಸಮಿತಿ ಹಾಸನ ಇವರ ಅಧ್ಯಕ್ಷತೆಯಲ್ಲಿ ನಡೆಯಿತು. ಮುಖ್ಯ ಅತಿಥಿಗಳಾದ ಶ್ರೀ ಸಿ.ಎಂ.ಚಂದ್ರಶೇಖ್ ಯುನೈಟೆಡ್ ಅಕಾಡೆಮಿ ಅಧ್ಯಕ್ಷರು, ಶ್ರೀ ಡಾ॥ ನಾಗರಾಜ್ ಅಧ್ಯಕ್ಷರು ಕಾರ್ಯಕಾರಿ ಸಮಿತಿ ಹಾಸನ, ಶ್ರೀ ಯು.ಎನ್. ಪರಮೇಶ್ವರ್ ಜಿಲ್ಲಾ ಆಯುಕ್ತರು ಸ್ಕೌಟ್ ಹಾಸನ, ಶ್ರೀ ಕೆ.ಹೆಚ್. ಹನುಮೇಗೌಡರು ಶಾಸಕರು ಹಾಸನ ಇವರು ಉಪಸ್ಥಿತರಿದ್ದು ಸಮಾರಂಭವನ್ನು ಯಶಸ್ವಿಗೊಳಿಸಿದರು.

## ತುಮಕೂರು ಜಿಲ್ಲೆ

ದಿನಾಂಕ : 30.12.2000 ದಂದು ಶಿರಾ ತಾಲ್ಲೂಕು ಸ್ಕೌಟ್ ಮತ್ತು ಗೈಡ್, ಕಬ್ಸ್ ಮೇಳ ನಡೆಯಿತು. ಶಾಸಕರಾದ ಪಿ.ಎಂ. ರಂಗನಾಥ್‌ರವರು ಮೇಳವನ್ನು ಉದ್ಘಾಟಿಸಿದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಹಾಗೂ ತಹಸಿಲ್ದಾರರಾದ ಶ್ರೀ ಆನಂದರಾವ್ ಮಧ್ಯಸ್ಥ ಇವರು ಅಧ್ಯಕ್ಷತೆ ವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಶಂಕರಪ್ಪನವರು ಉಪಸ್ಥಿತರಿದ್ದರು. ಮೇಳದ ಅಂಗವಾಗಿ ಸಸಿ ನೆಡುವ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು. ಸಮಾರೋಪ ಸಮಾರಂಭದಲ್ಲಿ ಡಾ। ರಾಮಕೃಷ್ಣ ಹಾಗೂ ಎಸ್.ಎ.ಎಂ. ಪ್ರಸಾದ್ ಉಪಸ್ಥಿತರಿದ್ದರು 100ಕ್ಕೂ ಹೆಚ್ಚು ಸ್ಕೌಟ್ ಮತ್ತು ಗೈಡ್ ಮಕ್ಕಳು ಭಾಗವಹಿಸಿದ್ದರು.

## ಉತ್ತರ ಕನ್ನಡ ಜಿಲ್ಲೆ

ದಿನಾಂಕ 22.2.2001 ರಂದು ಹೊನ್ನಾವರದ ಶರಾವತಿ ಕಲಾಮಂದಿರ ಕಟ್ಟಡದಲ್ಲಿ ಬೇಡನ್ ಪೊವೆಲ್‌ರವರ ಜನ್ಮದಿನಾಚರಣೆಯನ್ನು ಆಚರಿಸಲಾಯಿತು. ಪ್ರಾಂಶುಪಾಲರಾದ ಶ್ರೀ ಅಲೆಗ್ಸಾಂಡರ್ ಥಾಮರ್, ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಜೆ. ಅಬ್ರಹಾಂ ಈ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಈ ಕಾರ್ಯಕ್ರಮದಲ್ಲಿ 200ಕ್ಕೂ ಹೆಚ್ಚು ಸ್ಕೌಟ್ಸ್, ಗೈಡ್ಸ್ ಮಕ್ಕಳು ಭಾಗವಹಿಸಿದ್ದರು.

## ಬೆಂಗಳೂರು ದಕ್ಷಿಣ ಜಿಲ್ಲೆ

ದಿನಾಂಕ 22.2.2001 ರಂದು ಆನೇಕಲ್ ತಾಲ್ಲೂಕು ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ತಾಲ್ಲೂಕು ಮೇಳ ಹಾಗೂ ಸ್ಥಾಪಕರ ದಿನಾಚರಣೆ ನಡೆಯಿತು. ತಾಲ್ಲೂಕು ಪಂಚಾಯ್ತಿ ಅಧ್ಯಕ್ಷರಾದ ಶ್ರೀ ಕೆ.ಸಿ. ರಾಮಚಂದ್ರ, ಕಾರ್ಯ ನಿರ್ವಹಣಾ ಅಧಿಕಾರಿಗಳಾದ ಶ್ರೀ ಎಂ. ಉಮಾನಂದ ರೈ, ಆನೇಕಲ್ ಪುರಸಭಾ ಸದಸ್ಯರಾದ ಶ್ರೀ ಎ.ವಿ. ರಂಗರಾಜು ಎ.ಎಸ್.ಬಿ. ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಸೈಯದ್ ಪಾಜಾಸಾಬ್, ಮುಂತಾದವರು ಮೇಳದ ಉದ್ಘಾಟನೆಯ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಮೇಳದ ಅಂಗವಾಗಿ ಅನೇಕಚಟುವಟಿಕೆಗಳು ಮತ್ತು ಪಥ ಸಂಚಲನ ಏರ್ಪಾಡಾಗಿತ್ತು. ಸಂಜೆಯ ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಪಂಚಾಯ್ತಿ ಅಧ್ಯಕ್ಷರಾದ ಶ್ರೀ ಎಚ್.ಎನ್.. ಬಸವರಾಜು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಜಿಲ್ಲಾ ಆರೋಗ್ಯ ಮತ್ತು ಸ್ಥಾಯಿ ಸಮಿತಿಯ ಶ್ರೀಮತಿ ರತ್ನ. ಜಿ. ರೆಡ್ಡಿ, ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಹೆಚ್.ಸಿ. ಹಿರೇಮಠರವರು ಉಪಸ್ಥಿತರಿದ್ದರು.

ದಿನಾಂಕ 29.12.2000ದಿಂದ ದಿನಾಂಕ 30.12.2000ದ ವರೆಗೆ ತಮಿಳುನಾಡಿನ ಹೊಸೂರು ತಾಲ್ಲೂಕಿನ ಗುಡಿಚೆಟ್ಲು ಗ್ರಾಮದಲ್ಲಿ ತಮಿಳುನಾಡು ಹಾಗೂ ಕರ್ನಾಟಕ ರಾಜ್ಯಗಳ ಭಾವೈಕ್ಯತಾ ಶಿಬಿರವನ್ನು ಹಮ್ಮಿಕೊಳ್ಳಲಾಯಿತು. ಈ ಶಿಬಿರದಲ್ಲಿ ಆನೇಕಲ್ ಸ್ಥಳೀಯ ಸಂಸ್ಥೆಯ 210 ಸ್ಕೌಟ್, ಗೈಡ್ ಮಕ್ಕಳು ಮತ್ತು ಹೊಸೂರು ಸ್ಥಳೀಯ ಸಂಸ್ಥೆಯ 45 ಸ್ಕೌಟ್, ಗೈಡ್ ಮಕ್ಕಳು, ದಳ ನಾಯಕರುಗಳು ಭಾಗವಹಿಸಿದ್ದರು. ಶಿಬಿರದ ಅವಧಿಯಲ್ಲಿ ಸ್ಥಳೀಯ ದೇವಾಲಯದ ಪರಿಸರವನ್ನು ಸ್ವಚ್ಛಗೊಳಿಸಿ ರಸ್ತೆಯನ್ನು ನಿರ್ಮಿಸಲಾಯಿತು. ಹೊಸೂರಿನ ಲಯನ್ಸ್ ಸಂಸ್ಥೆಯವರು ಈ ಶಿಬಿರದ ಪ್ರಾಯೋಜಕರಾಗಿದ್ದರು. ಹೊಸೂರಿನ ಶಾಸಕರಾದ ಶ್ರೀ ವೆಂಕಟಸ್ವಾಮಿ, ಲಯನ್ಸ್ ಕ್ಲಬ್‌ನ ಅಧ್ಯಕ್ಷರಾದ ಲಯನ್ ಶ್ರೀ ಸಂಪತ್, ಗುಡಿ ಚಟ್ಲು ಗ್ರಾಮಪಂಚಾಯ್ತಿ ಅಧ್ಯಕ್ಷರಾದ ರಾಮಶೆಟ್ಟಿ, ಧರ್ಮಪುರಿ ಜಿಲ್ಲಾ ಆಯುಕ್ತರಾದ ಜಿ. ಶ್ರೀನಿವಾಸನ್, ಕರ್ನಾಟಕ ರಾಜ್ಯ ಜಂಟಿ ಕಾರ್ಯದರ್ಶಿಗಳಾದ ಚಿನ್ನಸ್ವಾಮಿ ರೆಡ್ಡಿ, ನಾಯಕ ತರಬೇತುದಾರರಾದ ಎನ್. ಶ್ರೀನಿವಾಸನ್, ಸಹಾಯಕ ಆಯುಕ್ತರಾದ ಮುನಿಸ್ವಾಮಿ ರೆಡ್ಡಿ ಭಾಗವಹಿಸಿದ್ದರು.

## ಗದಗ ಜಿಲ್ಲೆ

ದಿನಾಂಕ 5.2.2001 ರಿಂದ 7.2.2001 ರವರೆಗೆ ನರಗುಂದ ತಾಲ್ಲೋಕ್ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ಪೆಟ್ರೋಲ್ ನಾಯಕರ ತರಬೇತಿ ಶಿಬಿರ ನಡೆಯಿತು. ಇದರಲ್ಲಿ 104 ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಭಾಗವಹಿಸಿದ್ದರು. ಶ್ರೀ ಎಚ್.ಎಚ್. ಪೂಜಾರ್‌ರವರು ಇದರ ನಾಯಕರಾಗಿದ್ದರು. ಮುಕ್ತಾಯ ಸಮಾರಂಭದಲ್ಲಿ ತಾಲ್ಲೋಕಿನ ಕಾರ್ಯಾಧ್ಯಕ್ಷರಾದ ಶ್ರೀ ಎಂ.ಆರ್. ಕಾಳೆ, ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಟಿ.ಜಿ. ಸೈಯದ್, ಸಹಾಯಕ ಸ್ಕೌಟ್ ಕಮೀಷನರಾದ ಶ್ರೀ ಪಾಟೀಲರು ಭಾಗವಹಿಸಿದ್ದರು.

## ರಾಯಚೂರು ಜಿಲ್ಲೆ

ದಿನಾಂಕ 22.2.2001 ರಂದು ರಾಯಚೂರಿನ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ವಿಶ್ವ ಸ್ಕೌಟ್ ದಿನ, ಕೋಮು ಸೌಹಾರ್ದಯುತ ದಿನ ಹಾಗೂ ಜಿಲ್ಲಾ ಮೇಳ ಹಮ್ಮಿಕೊಳ್ಳಲಾಗಿತ್ತು. ಜಿಲ್ಲಾ ಯುವಜನ ಸೇವೆ ಹಾಗೂ ಕ್ರೀಡಾಧಿಕಾರಿಯಾದ ಶ್ರೀ ಬಾಲಕೃಷ್ಣರವರು ಸಮಾರಂಭವನ್ನು ಉದ್ಘಾಟಿಸಿದರು. ಜಿಲ್ಲಾ ಆಯುಕ್ತರಾದ ಶ್ರೀ ಕೆ. ತಿಮ್ಮಯ್ಯನವರು ಅಧ್ಯಕ್ಷತೆ ವಹಿಸಿದ್ದರು. ನಿವೃತ್ತ ಶಿಕ್ಷಣಧಿಕಾರಿಗಳಾದ ಶ್ರೀ ಪಿ. ಕಿರುಪಣ್ಣ ಚೆನ್ನಬಸಪ್ಪ, ಶ್ರೀಮತಿ ದಾನಮ್ಮ, ಜಿಲ್ಲಾ ಆಯುಕ್ತರು (ಗೈಡ್) ಆದ ಶ್ರೀಮತಿ ಕವಿತಾ ಪಾಟೀಲ್, ಜಿಲ್ಲಾ ಕಾರ್ಯದರ್ಶಿ ಶ್ರೀ ಆರ್. ನರಸಿಂಹ ಮೂರ್ತಿ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.




*ಸಮಾರಂಭದಲ್ಲಿ ಉಪಸ್ಥಿತರಿರುವ ಜಿಲ್ಲಾ ಆಯುಕ್ತರುಗಳಾದ ಶ್ರೀ ಕೆ. ತಿಮ್ಮಯ್ಯ ಮತ್ತು ಶ್ರೀಮತಿ ಕವಿತಾ ಪಾಟಿಲ್ ಮತ್ತು ಜಿಲ್ಲಾ ಕಾರ್ಯದರ್ಶಿ ಶ್ರೀ ನರಸಿಂಹಮೂರ್ತಿ ಮತ್ತಿತರರು.*

## ಹಾವೇರಿ ಜಿಲ್ಲೆ

ಸವಣೂರ ತಾಲ್ಲೂಕು ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ 19ನೇ ಸ್ಕೌಟ್ಸ್ ಮತ್ತು ಗೈಡ್ಸ್ ಕಬ್ಸ್ ಮತ್ತು ಬುಲ್ ಬುಲ್ ಮಕ್ಕಳ ಮೇಳ, ಹತ್ತಿಮತ್ತೂರಿನಲ್ಲಿ. ದಿನಾಂಕ ಫೆಬ್ರವರಿ 3, 4 ಮತ್ತು 5 ರಂದು ಸೋಮನಗೌಡ್ರು ಫಕ್ಕೀರಗೌಡ್ರು ದೊಡ್ಡ ಗೌಡ್ರ ಸ.ಪ.ಪೂರ್ವ ಮಹಾವಿದ್ಯಾಲಯದಲ್ಲಿ ನಡೆಸಿದರು. ಈ ಮೇಳದಲ್ಲಿ ಸಾಂಸ್ಕೃತಿಕ ಸಂಜೆ, ಸ್ಕೌಟ್ ಮೋಜಿನ ಜಾತ್ರೆ, ಭವ್ಯ

ಶಿಬಿರಾಗ್ನಿ, ಸರ್ವಧರ್ಮ ಸಮನ್ವಯ ಪ್ರಾರ್ಥನೆ ಹಾಗೂ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಕ್ರಮಗಳನ್ನು ನಡೆಸಿದರು.

## ಬಳ್ಳಾರಿ ಜಿಲ್ಲೆ :

ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ಹೊಸಪೇಟೆ ತಾ॥ ಭುವನ ಹಳ್ಳಿಯಲ್ಲಿ ದಿ. 6.1.2001 ರಿಂದ ದಿ 10.1.2001ರವರೆಗೆ ಸ್ಕೌಟ್ ಮತ್ತು ಗೈಡ್ಸ್ ಮಕ್ಕಳಿಂದ ಸಮುದಾಯ ಅಭಿವೃದ್ಧಿ ಸೇವಾ ಶಿಬಿರವನ್ನು ಆಯೋಜಿಸಲಾಗಿತ್ತು. ಶಿಬಿರದಲ್ಲಿ ಶಾಲೆಗೆ ಹೋಗುತ್ತಿರುವ ಮಕ್ಕಳ ಸಂಖ್ಯೆ ಬಗ್ಗೆ, ಆರೋಗ್ಯ ಮತ್ತು ನೈರ್ಮಲ್ಯ, ಗಿಡ ನಡುವೆ ಕಾರ್ಯಕ್ರಮಗಳನ್ನು ನಡೆಸಲಾಯಿತು. ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲಾಯಿತು. ಈ ಶಿಬಿರದಲ್ಲಿ 450 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ಶ್ರೀ ಆರ್. ವೆಂಕಣ್ಣ ಉಪಾಧ್ಯಕ್ಷರು ರಾಜ್ಯ ಸಂಸ್ಥೆ ಇವರು ಈ ಕಾರ್ಯಕ್ರಮವನ್ನು ಆಯೋಜಿಸಿದ್ದರು.

## ಉಡುಪಿ ಜಿಲ್ಲೆ :

ದಿ 22.2.2001 ರಂದು ಜಿಲ್ಲಾ ಸಂಸ್ಥೆವತಿಯಿಂದ ಸ್ಕೌಟ್ಸ್ ಸ್ಥಾಪಕರ ದಿನ ಮತ್ತು ರಸ್ತೆ ಸುರಕ್ಷತಾ ಸಂವಾದ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಅಂದು ಬೆಳಿಗ್ಗೆ ಧ್ವಜಾರೋಹಣದೊಂದಿಗೆ ಕಾರ್ಯಕ್ರಮ ಆರಂಭವಾಗಿದ್ದು, ಸರ್ವಧರ್ಮ ಪ್ರಾರ್ಥನೆ ಮಾಡಲಾಯಿತು.

ರಸ್ತೆ ಸುರಕ್ಷತಾ ಸಂವಾದ ಕಾರ್ಯಕ್ರಮವು ಬೆಳಿಗ್ಗೆ 10.30ಕ್ಕೆ ಜಿಲ್ಲಾ ಸಂಸ್ಥೆ ಕಾರ್ಯಾಧ್ಯಕ್ಷರಾದ ಶ್ರೀ ಪಿ.ರವೀಂದ್ರನಾಯಕ್‌ರವರ ಅಧ್ಯಕ್ಷತೆಯಲ್ಲಿ ಆರಂಭವಾಯಿತು. ಉಡುಪಿ ವೃತ್ತ ಆರಕ್ಷಕ ನಿರೀಕ್ಷಕರಾದ ಶ್ರೀ ಜಿ.ಎ. ಜಗದೀಶ್‌ರವರು ಸಂವಾದ ಕಾರ್ಯಕ್ರಮ ನಡೆಸಿಕೊಟ್ಟರು. ನಂತರ ಸಂಜೆ ಜಿಲ್ಲಾ ಡಿ.ವೈ. ಎಸ್.ಪಿ. ಶ್ರೀ ಆರ್. ದಿಲೀಪ್ ಸಮಾರೋಪ ಸಮಾರಂಭನಡೆಸಿಕೊಟ್ಟರು. ಈ ಎಲ್ಲಾ ಕಾರ್ಯಕ್ರಮಗಳಲ್ಲಿ ಉಡುಪಿ ನಗರ ಸಭೆ ಉಪಾಧ್ಯಕ್ಷರಾದ ಶ್ರೀ ರೋನಾಲ್ಡ್ ಪ್ರವೀಣ್‌ಕುಮಾರ್, ಕಡಿಯಾಳಿ ಮಹಿಷ ಮರ್ದಿನಿ ದೇವಳದ ಧರ್ಮದರ್ಶಿ ಶ್ರೀ ಕೆ. ಅನಂತರಾಮ ಉಪಾಧ್ಯ, ಜಿಲ್ಲಾ ಸಂಸ್ಥೆ ಕಾರ್ಯದರ್ಶಿ ಶ್ರೀ ಬಿ.ಜಿ. ವಾರಂಬಳ್ಳಿ, ಭಾಗವಹಿಸಿದ್ದರು. ಸಂವಾದ ಈ ಕಾರ್ಯಕ್ರಮದಲ್ಲಿ 160 ಸ್ಕೌಟ್ಸ್ ಗೈಡ್ಸ್, ಹಾಗೂ 20 ಸ್ಕೌಟರ್ ಗೈಡರ್‌ಗಳು ಭಾಗವಹಿಸಿದ್ದರು.

# THE NEWS

# RAMA DEVI HAILS SCOUTS AND GUIDES

Bangalore, March 17. : The Governor Ms. V.S. Rama Devi, Presented Chathurtha Charan, Heerak Pankh, Rajya Puraskar and Nipun awards to Bharat Scouts and Guides of the State at a function held here on Saturday.

Lauding the services of the Scouts and Guides, she donated Rs. 5,000 to the organisation.

The President of the Bharat Scouts and Guides, Mr. Rameshwar Thakur, said the Scout and Guides was started in the State 94 years ago. It had spread to various parts of the State since then.

The organisation had three training centres in the State. The Besant Park Training Centre at Doddaballapur would be developed into a major training centre in the country with the help of the State Government. There were over 34 lakh Scouts and Guides in the country, he said.

Chathurtha Charan awards were presented to 369 Cubs, Heerak Pankh awards to 423 Bulbuls, 1,264 Rajya Puraskar awards to Scouts and 930 to Guides, and Nipun awards to 28 Rovers and five Rangers. The Chief Commissioner of the state Bharat Scouts and Guides, Mr. Kondajji B. Shanmukhappa, welcomed the gathering. The Secretary, Mr. T.S. Lucas, proposed a vote of thanks.

The Scouts and Guides presented cultural programmes on partiotism and national integrity.

THE HINDU

Sunday, March 18, 2001

## ಸ್ಕೌಟ್ಸ್ ಆಂದೋಳನ : ಗ್ರಾಮ ಪಂಚಾಯ್ತಿಗಳ ಸಹಕಾರಕ್ಕೆ ಸಲಹೆ

ಬೆಂಗಳೂರು. ಮಾರ್ಚ್ 17. - ಸ್ಕೌಟ್ಸ್ ಮತ್ತು ಗೈಡ್ಸ್ ಆಂದೋಳನ ಗ್ರಾಮೀಣ ಭಾಗಗಳಲ್ಲಿ ವ್ಯಾಪಕವಾಗಿ ಬೆಳೆಯಲು ಗ್ರಾಮ ಪಂಚಾಯ್ತಿಗಳು ಹೆಚ್ಚಿನ ಸಹಕಾರ, ನೆರವು ನೀಡುವ ಬಗ್ಗೆ ಹೆಚ್ಚಿನ ಆಸಕ್ತಿ ತೋರುವ ಅವಶ್ಯಕತೆಯಿದೆ ಎಂದು ರಾಜ್ಯಪಾಲರಾದ ವಿ.ಎಸ್. ರಮಾದೇವಿ ಇಂದು ಇಲ್ಲಿ ಅಭಿಪ್ರಾಯಪಟ್ಟರು.

ರಾಜಭವನದ ಗಾಜಿನಮನೆಯಲ್ಲಿ ಅವರು ಕಬ್ಸ್, ಬುಲ್‌ಬುಲ್, ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ 'ಚತುರ್ಥ ಚರಣ್', 'ಹೀರಕ್ ಪಂಖ್', 'ರಾಜ್ಯ ಪುರಸ್ಕಾರ್' ಮತ್ತು 'ನಿಪುಣ್' ಪ್ರಶಸ್ತಿಗಳನ್ನು ವಿತರಿಸಿ ಮಾತನಾಡುತ್ತಿದ್ದರು.

ಜಾತಿರಹಿತ, ವರ್ಗರಹಿತ ಸಮಾಜವನ್ನು ಕಟ್ಟುವಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಕೊಡುಗೆ ಮಹತ್ತರವಾದದು ಎಂದ ಅವರು, ಕರ್ನಾಟಕದಲ್ಲಿ ಈ ಚಳವಳಿಯ ಹುಟ್ಟು ಆಗಿದ್ದಕ್ಕೆ ಕನ್ನಡಿಗರು ಹೆಮ್ಮೆ ಪಡಬೇಕು ಎಂದು ಅವರು ನುಡಿದರು.

ಇದಕ್ಕೆ ಮೊದಲು ಮಾತನಾಡಿದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರೀಯ ಅಧ್ಯಕ್ಷ ರಾಮೇಶ್ವರ ಠಾಕೂರ್, ಸ್ಕೌಟ್ಸ್ ಚಳವಳಿಯನ್ನು ಗ್ರಾಮೀಣ ಭಾಗಗಳಿಗೆ ವಿಸ್ತರಿಸುವುದಕ್ಕೆ ಹೆಚ್ಚಿನ ಒತ್ತು ಕೊಡಬೇಕಾಗಿದೆ ಎದು ಹೇಳಿದರು.

ರಾಷ್ಟ್ರದಲ್ಲಿ ಪ್ರಸ್ತುತ 30 ಲಕ್ಷಕ್ಕೂ ಹೆಚ್ಚು ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿದ್ದು, ಅವರಿಂದ ಸಮಾಜ ಸೇವಾ ವಲಯದಲ್ಲಿ ನಿರ್ದಿಷ್ಟ ಪ್ರಮಾಣದಲ್ಲಿ ಕಾರ್ಯಕ್ರಮಗಳು ನಡೆಯುತ್ತಿವೆ ಎಂದರು.

ರಾಜ್ಯ ಮುಖ್ಯ ಕಮಿಷನರ್ ಕೊಂಡಜ್ಜಿ ಬಿ. ಷಣ್ಮುಖಪ್ಪ ಪ್ರಾಸ್ತಾವಿಕವಾಗಿ ಮಾತನಾಡಿದ ಅತಿಥಿಗಳನ್ನು ಸ್ವಾಗತಿಸಿದರು. ಗೈಡ್ಸ್ ವಿಭಾಗದ ರಾಜ್ಯ ಕಮಿಷನರ್ ಶ್ರೀಮತಿ ಭೋಪಯ್ಯ. ಸ್ಕೌಟ್ಸ್ ವಿಭಾಗದ ರಾಜ್ಯ ಕಮಿಷನರ್ ಮುಹಮ್ಮದ್ ಜಹೀರುದ್ದೀನ್. ಕಲ್ಬುರ್ಗಿ ವಿವಿ ಮಾಜಿ ಕುಲಪತಿ ಮುನಿಯಮ್ಮ, ರಾಜ್ಯ ಯುವಜನ ಸೇವೆ ಮತ್ತು ಕ್ರೀಡಾ ಆಯುಕ್ತ ರವೀಂದ್ರನಾಥ ಠಾಗೋರ್ ಮತ್ತಿತರರು ಉಪಸ್ಥಿತರಿದ್ದರು.

ಇದೇ ಸಂದರ್ಭದಲ್ಲಿ ವಿವಿಧ ಘಟಕಗಳಿಗೆ ಸೇರಿದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು. ನಗರದ ಶಾಲೆಗಳ ಕೇಸರಿ ಬಿಳಿ ಹಸಿರು ಬಣ್ಣದ ಬಟ್ಟೆ ತೊಟ್ಟ ಮಕ್ಕಳು 'ಹಚ್ಚೇವು ಕನ್ನಡದ ದೀಪ', 'ಓ ನಮ್ಮ ಬಾವುಟ' ಗೀತೆಗಳಿಗೆ ಹೆಜ್ಜೆ ಹಾಕಿದರೆ. ದಕ್ಷಿಣ ಕನ್ನಡದ ಪುಟಾಣಿಗಳು ಸಾಂಪ್ರದಾಯಕಿ ಉಡುಗೆ ತೊಟ್ಟು ನೃತ್ಯ ಪ್ರದರ್ಶಿಸಿದರು. ಪೋಷಕರು. ತರಬೇತುದಾರರು ಹಾಗೂ ಮಕ್ಕಳಿಂದ ತುಂಬಿದ್ದ ಗಾಜಿನಭವನದಲ್ಲಿ ಒಂದು ರೀತಿಯ ಸಂಭ್ರಮದ ವಾತಾವರಣ ನಿರ್ಮಾಣಗೊಂಡಿತ್ತು.

**ಪ್ರಜಾವಾಣಿ**

## ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಪ್ರೋತ್ಸಾಹ ಅಗತ್ಯ

ಬೆಂಗಳೂರು. ಮಾರ್ಚ್ 17. - ಗ್ರಾಮೀಣ ಪ್ರದೇಶಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯು ಸಕ್ರಿಯವಾಗಿ ಕಾರ್ಯನಿರ್ವಹಿಸುತ್ತಿದ್ದು, ಗ್ರಾಮ ಪಂಚಾಯಿತಿಗಳು ಈ ವಿಷಯದಲ್ಲಿ ಹೆಚ್ಚು ಆಸಕ್ತಿ ವಹಿಸಿ ಪ್ರೋತ್ಸಾಹಿಸಬೇಕೆಂದು ರಾಜ್ಯಪಾಲರಾದ ವಿ. ರಮಾದೇವಿ ಕರೆ ನೀಡಿದ್ದಾರೆ.

ಕರ್ನಾಟಕದ ದಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶಾಖೆಯು ಹಮ್ಮಿಕೊಂಡಿದ್ದ ರಾಜ್ಯ ಪುರಸ್ಕಾರ ಪ್ರಶಸ್ತಿ ಪ್ರದಾನ ಸಮಾರಂಭವನ್ನು ಉದ್ಘಾಟಿಸಿ ಅವರು ಮಾತನಾಡುತ್ತಿದ್ದರು. ಸ್ಕೌಟ್ಸ್ ಮತ್ತು ಗೈಡ್ಸ್ ಶಾಖೆಗಳ ಅಭಿವೃದ್ಧಿಗಾಗಿ ಗ್ರಾಮ ಪಂಚಾಯಿತಿಗಳಿಗೆ ಬೇಕಾಗಿರುವ ಧನ ಸಹಾಯವನ್ನು ಒದಗಿಸುವ ಸಲುವಾಗಿ ಪಂಚಾಯತ್ ರಾಜ್ ಸಚಿವರೊಂದಿಗೆ ಮಾತನಾಡುವುದಾಗಿ ಈ ಸಂದರ್ಭದಲ್ಲಿ ಅವರು ಭರವಸೆ ನೀಡಿದರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಅಖಿಲ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಅಧ್ಯಕ್ಷ ರಾಮೇಶ್ವರ್ ಠಾಕೂರ್ ಮಾತನಾಡಿ ಅಕ್ಟೋಬರ್ ತಿಂಗಳಲ್ಲಿ ಪ್ರಪ್ರಥಮ ಏಷಿಯಾ ಫೆಸಿಫಿಕ್ ಸಮ್ಮೇಳನವನ್ನು ಬೆಂಗಳೂರಿನಲ್ಲಿ ನಡೆಸುವುದಾಗಿ ಘೋಷಿಸಿದರು.

ಬೆಂಗಳೂರಿನ ಬೇಸೆಂಟ್ ಉದ್ಯಾನ ವನದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗಾಗಿ ಹೊಸ ತರಬೇತಿ ಕೇಂದ್ರವನ್ನು ಸ್ಥಾಪಿಸಲು ಉದ್ದೇಶಿಸಿರುವುದಾಗಿ ತಿಳಿಸಿದ ಅವರು ರಾಜ್ಯ ಸರ್ಕಾರವು ಈ ಕೇಂದ್ರದ ಸ್ಥಾಪನೆಗೆ 50 ಲಕ್ಷ ರೂ.ಗಳನ್ನು ನೀಡುವುದಾಗಿ ಭರವಸೆ ನೀಡಿದೆ ಎಂದು ಹೇಳಿದರು. ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯು ಮೊದಲ ಬಾರಿಗೆ ಕರ್ನಾಟಕದಲ್ಲೇ ಪ್ರಾರಂಭ ವಾಗಿದ್ದನ್ನು ನೆನಪಿಸಿಕೊಂಡ ಅವರು ಕರ್ನಾಟಕದ ಸ್ಕೌಟ್ಸ್ ಮತ್ತು ಗೈಡ್ಸ್ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದೆ ಎಂದು ಪ್ರಶಂಸಿಸಿದರು.

5 ರಿಂದ 10 ವರ್ಷದ ಕಬ್ಸ್ ಮತ್ತು ಬುಲ್ ಬುಲ್ಸ್‌ಗೆ ಚತುರ್ಥ ಚರಣ್ ಮತ್ತು ಹೀರಕ್ ಪಂಖ್ ಪ್ರಶಸ್ತಿ, 11 ರಿಂದ 17 ವರ್ಷದ ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ರಾಜ್ಯ ಪುರಸ್ಕಾರ ಪ್ರಶಸ್ತಿ, 18 ರಿಂದ 25 ವರ್ಷದ ರೋವರ್ಸ್ ಮತ್ತು ರೇಂಜರ್ಸ್ ನಿಪುಣ್ ಪ್ರಶಸ್ತಿಯನ್ನು ನೀಡಿ ರಾಜ್ಯಪಾಲರು ಸನ್ಮಾನಿಸಿದರು.

**ಸಂಯುಕ್ತ ಕರ್ನಾಟಕ**

*Not to take things too seriously,*
*But to make the best of what you have got,*
*and to look on life as a game,*
*and the world as a play ground.*
*And let your actions and thoughts*
*be directed by love.*
**- LORD BADEN POWELL**

# ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಪಂಚಾಯಿತಿ ಸಂಸ್ಥೆಗಳ ಸಹಕಾರ : ರಾಜ್ಯಪಾಲರ ಸಲಹೆ

ಬೆಂಗಳೂರು. ಮಾರ್ಚಿ 17. - ಯುವಕರನ್ನು ಸತ್ಪ್ರಜೆಳಾಗಿ ರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ರಾಜ್ಯದ ಮೂಲೆಮೂಲೆಗೆ ತಲುಪುವಂತಾಗಲು ಪಂಚಾಯಿತಿ ರಾಜ್ ಸಂಸ್ಥೆಗಳು ಆಸಕ್ತಿ ವಹಿಸಬೇಕೆಂದು ರಾಜ್ಯಪಾಲ ವಿ.ಎಸ್. ರಮಾದೇವಿ ಇಂದು ಇಲ್ಲಿ ಕರೆ ನೀಡಿದರು.

ರಾಜಭವನದಲ್ಲಿ ನಡೆದ ಕಾರ್ಯಕ್ರಮದಲ್ಲಿ ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್ ಬುಲ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ ರಾಜ್ಯಪುರಸ್ಕಾರ, ಚತುರ್ಥ ಚರಣ್, ಹೀರಕ್ ಪಂಕ್ ಮತ್ತು ನಿಪುಣ ಪ್ರಶಸ್ತಿಗಳನ್ನು ಪ್ರದಾನ ಮಾಡಿ ಅವರು ಮಾತನಾಡುತ್ತಿದ್ದರು.

ಯುವಕರಲ್ಲಿ ದೈಹಿಕ, ವೈಚಾರಿಕ ಮತ್ತು ಸಾಮಾಜಿಕ ಪ್ರಜ್ಞೆಯ ಜೊತೆಗೆ ಅವರನ್ನು ದೇಶದ ಉತ್ತಮ ಪ್ರಜೆಗಳಾಗಿ ರೂಪಿಸುವ ಉದ್ದೇಶದ ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿ ಗ್ರಾಮೀಣ ಭಾಗಗಳಿಗೆ ತಲುಪಬೇಕಿದೆ, ಈ ಸಂಬಂಧ ಪಂಚಾಯಿತಿ ರಾಜ್ ಸಂಸ್ಥೆಗಳ ಸಹಕಾರ ಮತ್ತು ಪ್ರೋತ್ಸಾಹ ಅಗತ್ಯವಾಗಿದೆ ಎಂದು ಅವರು ಅಭಿಪ್ರಾಯಪಟ್ಟರು.

ಕರ್ನಾಟಕದಲ್ಲಿ 94 ವರ್ಷಗಳ (1909) ಹಿಂದೆ ಆರಂಭವಾದ ಈ ಚಳುವಳಿ ದೇಶದಲ್ಲಿ ಜಾತಿ ಮತ್ತು ಲಿಂಗಭೇದ ರಹಿತ ಸಮಾಜ ನಿರ್ಮಾಣದ ಜೊತೆಗೆ ಸಮಾಜದಲ್ಲಿ ಸಾಮರಸ್ಯ ಭಾವನೆಯನ್ನು ಬೆಳೆಸಲು ಸಹಕಾರಿಯಾಗಿದೆ ರೂಪುಗೊಂಡಿರುವ ಇದನ್ನು ಮತ್ತಷ್ಟು ವಿಸ್ತರಿಸಬೇಕಿದೆ. ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿಯಲ್ಲಿ ಸರ್ಕಾರಿ ಮತ್ತು ಗೈಡ್ಸ್ ಚಳುವಳಿಯಲ್ಲಿ ಸರ್ಕಾರಿ ಮತ್ತು ಮಹಾನಗರ ಪಾಲಿಕೆಗಳ ಶಾಲಾ ವಿದ್ಯಾರ್ಥಿಗಳು ಸಹ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುತ್ತಿರುವುದು ಸ್ವಾಗತಾರ್ಹ ಬೆಳವಣಿಗೆ ಎಂದರು.

**ಉದಯವಾಣಿ**

*Don't hate but love*
*Dont' break off in anger*
*But unite in Peace.*

\- SWAMI VIVEKANANDA

# ಸ್ಕೌಟ್ಸ್-ಗೈಡ್ಸ್‌ಗೆ ಪ್ರೋತ್ಸಾಹ : ಪಂಚಾಯ್ತಿಗಳಿಗೆ ರಾಜ್ಯಪಾಲರ ಸಲಹೆ

ಬೆಂಗಳೂರು. ಮಾರ್ಚಿ 17. - ಶತಮಾನದಷ್ಟು ಹಿಂದೆ ಕರ್ನಾಟಕದಲ್ಲೇ ಹುಟ್ಟಿ ಜಾಗತಿಕ ಮಟ್ಟದಲ್ಲಿ ವ್ಯಾಪಿಸಿದ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಬಗ್ಗೆ ಕನ್ನಡಿಗರಾದ ನಾವು ಹೆಮ್ಮೆ ಪಡಬೇಕು ಎಂದು ರಾಜ್ಯಪಾಲರಾದ ವಿ.ಎಸ್. ರಮಾದೇವಿ ಹೇಳಿದ್ದಾರೆ.

ರಾಜಭವನದ ಆವರಣದಲ್ಲಿ ಶನಿವಾರ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಪ್ರಶಸ್ತಿ ಪ್ರದಾನ ಮಾಡಿ ಅವರು ಮಾತನಾಡುತ್ತಿದ್ದರು.

ಶಿಸ್ತಿನ ಸಂಘಟನೆಗಳಾದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಪಂಚಾಯಿತಿಗಳೂ ಪ್ರೋತ್ಸಾಹ ನೀಡಬೇಕು. ಆ ಬಗ್ಗೆ ಗ್ರಾಮೀಣಾಭಿವೃದ್ಧಿ ಸಚಿವರೊಂದಿಗೆ ಸಮಾಲೋಚನೆ ನಡೆಸುವುದಾಗಿ ಅವರು ಹೇಳಿದರು.

ಮಕ್ಕಳು, ಯುವಕರು ಸಮಾಜಕ್ಕೆ ಬದ್ಧರಾಗಿರಬೇಕು. ದೇಶಕ್ಕಾಗಿ ತ್ಯಾಗ ಮಾಡುವಂತಹ ಮನೋಭಾವ ಬೆಳೆಸಿಕೊಳ್ಳಬೇಕು. ಹಿರಿಯರು ಕಿರಿಯರಿಗೆ ಸೂಕ್ತ ಮಾರ್ಗದರ್ಶನ ನೀಡಬೇಕಾದ್ದು ಇಂದಿನ ಅವಶ್ಯಕತೆ. ಕಿರಿಯರೂ ಹಿರಿಯರ ಹಿತನುಡಿಗಳ ಪರಿಪಾಲನೆ ಮಾಡಬೇಕು ಎಂದು ಅವರು ಕಿವಿಮಾತು ಹೇಳಿದರು.

**ಪ್ರಶಸ್ತಿ ವಿತರಣೆ :**

ಈ ಸಂದರ್ಭದಲ್ಲಿ 369 ಕಬ್‌ಗಳಿಗೆ ಚತುರ್ಥ ಚಾರಣ, 423 ಬುಲ್‌ಬುಲ್‌ಗಳಿಗೆ ಹೀರಕ್ ಪಂಕ್, 1264 ಸ್ಕೌಟ್ಸ್‌ಗಳಿಗೆ ರಾಜ್ಯ ಪುರಸ್ಕಾರ, 930 ಗೈಡ್ಸ್‌ಗಳಿಗೆ ರಾಜ್ಯ ಪುರಸ್ಕಾರ, 28 ರೋವರ್‌ಗಳಿಗೆ ನಿಪುಣ ಹಾಗೂ ಐವರು ರೇಂಜರ್‌ಗಳಿಗೆ ನಿಪುಣ ಪ್ರಶಸ್ತಿಗಳನ್ನು ನೀಡಲಾಯಿತು. ನಿಪುಣ ಪ್ರಶಸ್ತಿಗಳನ್ನು ಇದೇ ಮೊದಲ ಬಾರಿಗೆ ನೀಡಲು ಆರಂಭ ಮಾಡಲಾಗಿದ್ದು, ಪ್ರಶಸ್ತಿಯನ್ನು ರಾಜ್ಯಪಾಲರಾದವಿ.ಎಸ್. ರಮಾದೇವಿ ನೀಡಿದ್ದಾರೆ.

ಕಾರ್ಯಕ್ರಮದಲ್ಲಿ ಯುವಜನ ಸೇವಾ ಹಾಗೂ ಕ್ರೀಡಾ ಇಲಾಖೆಯ ಆಯುಕ್ತ ರವೀಂದ್ರನಾಥ ಠ್ಯಾಗೋರ್, ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯ ಪ್ರಧಾನ ಆಯುಕ್ತ ಕೊಂಡಜ್ಜಿ ಷಣ್ಮುಖಪ್ಪ, ರಾಜ್ಯ ಕಾರ್ಯದರ್ಶಿ ಟಿ.ಎಸ್. ಲೂಕಾಸ್, ಗುಲಬರ್ಗಾ ವಿಶ್ವವಿದ್ಯಾಲಯದ ಮಾಜಿ ಉಪಕುಲಪತಿ ಮುನಿಯಮ್ಮ ಮತ್ತಿತರು ಹಾಜರಿದ್ದರು.

ರಾಜ್ಯ ಎಲ್ಲ ಜಿಲ್ಲೆಗಳಿಂದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು, ತರಬೇತಿದಾರರು, ಶಿಕ್ಷಕರು ಆಗಮಿಸಿದ್ದರು.

**ಕನ್ನಡಪ್ರಭ**

# THE BHARAT SCOUTS & GUIDES

## Our Fundamentals

### Definition :

The Bharat Scouts & Guides is a voluntary, non-political, educational movement for young people, open to all without distinction of origin, race or creed, in accordance with the purpose, principles and method conceived by the Founder Lord Baden Powell in 1907.

### Purpose :

The purpose of the Movement is to contribute to the development of young people in achieving their full physical, intellectual, social and spiritual potentials as individuals, as responsible citizens and as members of the local, national and international communities.

### Principles :

The Scout/Guide Movement is based on the following Principles.

### Duty to God :

Adherence to spiritual principles, loyalty to the religion that expresses them and acceptance of the duties resulting therefrom.

(Note : The word "Dharma" may be substituted for the word "God" if so desired).

### Duty to Others :

- Loyalty to one's country in harmony of local and international peace, understanding, co-operation.
- Participation in the development of society with recognition and respect for the dignity of one's fellowmen and for the intergrity of the natural world.

### Duty to Self :

Responsibility for the development of oneself.

### The Method :

The Scout/Guide Method is a system of progressive self-education through:

- A Promise and Law.
- Learning by Doing.
- Membership of small groups under adult leadership involving progressive discovery and acceptance of responsibility and training towards self-government directed towards the development of character, and the acquisition of competence, self-reliance, dependability and capacities to co-operate and to lead.
- Progressive and stimulating programmes of various activities based on the interests of the participants including games, useful skills and services to the community taking place largely in an outdoor setting in contact with nature.

### The Promise :

***a) Promise for the Scout and the Rover is :***

"On my honour, I promise that I will do my best,

to do my duty to God and my country;

to help other people and to obey the Scout Law".

b) ***The Promise for the Guide and the Ranger is :***

Same as above with a change of "Guide Law".

c) ***The Promise for the Cub is ;***

"I promise to do my best to do my duty to God and my country

to keep the Cub Law and to do a Good turn every day,".

d) ***The Promise for the Bulbul is :***

Same as above with a change of "Bulbul Law".

*Note:*1. The word 'Dharma' may be substituted for the word 'God' if so desired.

2. The Promise is to be made on the occasion of the Investiture and in the case of a Rover or Ranger who is already a Scout or Guide, the Promise is to be reaffirmed.

## The Law :

The Law for the Scout and the Rover is;

1. A Scout is trustworthy.
2. A Scout is loyal.
3. A Scout is a friend to all and a brother to every other Scout.
4. A Scout is courteous.
5. A Scout is a friend to animals and loves nature.
6. A Scout is disciplined and helps protect public property.
7. A Scout is courageous.
8. A Scout is thrifty.
9. A Scout is pure in thought word and deed.

2. The Law for the Guide and the Ranger is the same as above replacing the word "Guide" in place of word "Scout".

Note : The word "Dharma" may be substitued for the word 'God' if so desired.

3. ***The Law for the Cub is :***

1. The Cub gives in to the elders ;
2. The Cub is clean and Courteous.

4. ***The Law for the Bulbul is :***

Same as above replacing "Bulbul" in place of "Cub".

***Courtesy :***
***State Documentation and Information centre***


**ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರ**

ಸಲಹೆಗಾರರು
ಗೊ.ರು. ಚನ್ನಬಸಪ್ಪ

ಸಂಪಾದಕರು
ಟಿ.ಎಸ್. ಲೂಕಾಸ್

ಸದಸ್ಯರು
ಚನ್ನಸ್ವಾಮಿ ರೆಡ್ಡಿ
ಗೀತಾ ನಟರಾಜ್
ಹೆಗಡೆ ಹಲಸಿಗೆ

ಸಹ ಸಂಪಾದಕರು
ಎಂ.ಎ.ಚೆಲ್ಲಯ್ಯ
ಎನ್. ಶ್ರೀನಿವಾಸನ್